# ಶ್ರೀ ಜಗದ್ಗುರು
# ಪಂಚಪೀಠಾಧೀಶ್ವರರು







ಶ್ರೀ ಷ॥ ಬ್ರ॥ ಡಾ॥ ಶಿವಾನಂದ ಶಿವಾಚಾರ್ಯರು

ಶ್ರೀ ಜಗದ್ಗುರು ಪಂಚಾಚಾರ್ಯ ಮಾನವಧರ್ಮ ಸಂಸ್ಥೆ
ಬೆಂಗಳೂರು.

|| ಓಂ ||

# ಶ್ರೀ ಜಗದ್ಗುರು ಪಂಚಪೀಠಾಧೀಶ್ವರರು

ವೇದಾಂತಾಚಾರ್ಯ
ಶ್ರೀ ಷ. ಬ್ರ. ಡಾ. ಶಿವಾನಂದ ಶಿವಾಚಾರ್ಯರು ಎಂ.ಎ. ಪಿಎಚ್.ಡಿ
ಎಲ್‌ಎಲ್.ಬಿ. (ತೃತೀಯ)

ಶ್ರೀ ಜಗದ್ಗುರು ಪಂಚಾಚಾರ್ಯ ಮಾನವಧರ್ಮ ಸಂಸ್ಥೆ
ಬೆಂಗಳೂರು

**Shri Jagadguru Panchapeethadhishwararu**
By Shri Sha. Bra. Dr. Shivanand Shivacharya

**Publisher :** Shri Jagadguru Panchacharya
Manava Dharma Samstha, Bangalore.

11th October, 1993

Printed Pages :

Price : Rs. 8-00

Typeset by :
Shri Sangamesh Compugraphics
**Guledgudd** - 587 203

Printed at :
M/s. Shri Sangamesh Offset Printers
P.B. No. 8, **Guledgudd** - 587 203

|| ಶ್ರೀ ಜಗದ್ಗುರು ರೇಣುಕಾಚಾರ್ಯ: ಪ್ರಸೀದತು ||

## ಶ್ರೀ ಜಗದ್ಗುರು ಪಂಚಾಚಾರ್ಯ ಮಾನವ ಧರ್ಮ ಸಂಸ್ಥೆಯ ಅಧ್ಯಕ್ಷರಾದ ಶ್ರೀಮದ್ ರಂಭಾಪುರೀ ವೀರಸಿಂಹಾಸನಾಧೀಶ್ವರ ಶ್ರೀಶ್ರೀಶ್ರೀ ೧೦೦೮ ಜಗದ್ಗುರು ಪ್ರಸನ್ನ ರೇಣುಕ ವೀರ ಸೋಮೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಭಗವತ್ಪಾದರ ಶುಭಾಶೀರ್ವಾದ ಸಂದೇಶ

ಅನಾದಿ ಕಾಲದಿಂದ ನಿರಂತರ ಧರ್ಮಬೋಧಾಮೃತವನ್ನು ಧಾರೆ ಎರೆಯುತ್ತ ಬಂದಿರುವ ಪಂಚ ಮಹಾಪೀಠಗಳು ವೀರಶೈವ ಸಿದ್ಧಾಂತದ ಕೇಂದ್ರಸ್ಥಾನಗಳಾಗಿವೆ. ಶಿವಾದ್ವೈತ ಸಿದ್ಧಾಂತದ ಪುಣ್ಯತಾಣಗಳಾಗಿವೆ. ಇವುಗಳ ಆಳ–ಆಗಲ ವಿಶಾಲವಾದುದು ಮತ್ತು ವೈಶಿಷ್ಟ್ಯಪೂರ್ಣವಾದುದು. ಈ ಪೀಠಗಳ ಪವಿತ್ರ ಪರಂಪರೆ ಅಂದಿನಿಂದ ಇಂದಿನವರೆಗೂ ಮುಂದುವರಿದುಕೊಂಡು ಬಂದಿದ್ದು ಸಮಾಜಕ್ಕೆ ಮಾರ್ಗದರ್ಶನ ಮಾಡುತ್ತ ಜನರ ಬಾಳ–ಬದುಕಲ್ಲಿ ಹೊಂಬೆಳಕನ್ನು ಚೆಲ್ಲಿದೆ.

ಇದುವರೆಗೆ ಶ್ರೀಪೀಠಗಳ ಪರಿಚಯ ಮತ್ತು ಇಂದಿನ ಪೀಠಾಧೀಶ್ವರರು ಹಮ್ಮಿಕೊಂಡ ರಚನಾತ್ಮಕ ಕಾರ್ಯಗಳ ಸಮಗ್ರ ಚಿಂತನವುಳ್ಳ ಕೃತಿಗಳ ಕೊರತೆ ಇತ್ತು. ಇದನ್ನು ತಿಳಿದ ವಿದ್ಯಾವಿನಯಸಂಪನ್ನರಾದ ಶ್ರೀಪೀಠದ ಶಾಖಾನ್ವಿತ ಅಮರೇಶ್ವರ ಮಠದ ಶ್ರೀ ಷ. ಬ್ರ. ಡಾ. ಶಿವಾನಂದ ಶಿವಾಚಾರ್ಯರು ವಾಸ್ತವಿಕ ವಿಚಾರಗಳನ್ನು ಒಳಗೊಂಡ ಸುಂದರ–ಬಂಧುರ ಸಾಹಿತ್ಯದಿಂದ "ಶ್ರೀ ಜಗದ್ಗುರು ಪಂಚಪೀಠಾಧೀಶ್ವರರು" ಎಂಬ ಕೃತಿಯನ್ನು ರಚಿಸಿ ಕನ್ನಡಿಗರ ಕೈಗೆ ಕೊಡುತ್ತಿರುವುದು ನಾಡಿಗರ ಸೌಭಾಗ್ಯ. ಪ್ರಬುದ್ಧ ಪರಂಪರೆಯ ಪೀಠಗಳ ಹಿರಿಮೆ ಮತ್ತು ಪೀಠಾಧೀಶ್ವರರ ಯೋಜನೆಗಳ ಸಾಕಾರ ರೂಪವನ್ನಿಲ್ಲಿ ಕಾಣಬಹುದು. ಕೃತಿಯ ಉದ್ದಗಲಕ್ಕೂ ಹಬ್ಬಿದ ಸಾಹಿತ್ಯದ ಸವಿಯನ್ನು ಕಂಡುಂಡು ಹಿಡಿಸಲಾರದಷ್ಟು ಸಂತಸ ಸನ್ನಿಧಿಯ ಹೊತ್ತೊಡಲಿಗಾಗಿದೆ. ಶ್ರೀಗಳವರ ಸಾಹಿತ್ಯ ಶ್ರೀಮಂತಿಕೆ ಜನ–ಮನದ ಕೊಳೆಯನ್ನು ಕಳೆದು ಜ್ಞಾನಜ್ಯೋತಿಯನ್ನು ಬೆಳಗಿಸುವಲ್ಲಿ ಯಾವ ಸಂಶಯವೂ ಇಲ್ಲ.

ಪರಮದಯಾಳು ಶ್ರೀ ಪಾರ್ವತೀಪರಮೇಶ್ವರರು ಹಾಗೂ ಶ್ರೀ ಜಗದ್ಗುರು ರೇಣುಕಾಚಾರ್ಯರು ಸರ್ವರಿಗೂ ಮಂಗಲ–ಪರಂಪರೆಯನ್ನು ಅನುಗ್ರಹಿಸಲಿ.

ಮಲಯಾಚಲ ತಪೋಭೂಮಿ — ಇತ್ಯಾನಂತ ಶಿವಾಶಿಷ:

ಆಷಾಢ ಶುದ್ಧ ೧, ಸೋಮವಾರ

# ಗ್ರಂಥಕರ್ತರು



## ಶ್ರೀ ಷ. ಬ್ರ. ಡಾ. ಶಿವಾನಂದ ಶಿವಾಚಾರ್ಯರು

ಅಮರೇಶ್ವರ ಶ್ರೀಮಠ, ಕೋಟೆಕಲ್ಲ – ಗುಳೇದಗುಡ್ಡ

ಜನ್ಮಸ್ಥಾನ : ವಿಜಾಪುರ

ವಿದ್ಯಾರ್ಹತೆ : ಎಂ.ಎ., ಪಿಎಚ್.ಡಿ. (ಸಂಸ್ಕೃತ) ಲಬ್ಧ ಸುವರ್ಣಪದಕರು

ಸಂಶೋಧನ ಪ್ರಬಂಧದ ವಿಷಯ : ಶ್ರೀ ಕುಮಾರದಾಸನ "ಜಾನಕೀಹರಣಮ್" ಮಹಾಕಾವ್ಯದ ಮೇಲೆ ಒಂದು ಸಾಹಿತ್ಯಿಕ ಅಧ್ಯಯನ

*ಶಕ್ತಿ ವಿಶಿಷ್ಟಾದ್ವೈತ ವೇದಾಂತದಲ್ಲಿ ಕಾಶೀ ಶ್ರೀ ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾಲಯದಿಂದ ವೇದಾಂತಾಚಾರ್ಯ ಪದವಿ ; ಕಾಶೀ ಹಿಂದೂ ವಿಶ್ವವಿದ್ಯಾಲಯದ ಕಾನೂನು ವಿಭಾಗದಲ್ಲಿ ಮೂರನೆಯ ವರ್ಷದ ಅಧ್ಯಯನ. (LL.B. III Year) ; ಬನಾರಸ್ ಹಿಂದೂ ವಿಶ್ವವಿದ್ಯಾಲಯದ ಶ್ರೀ ಮದನ್ ಮೋಹನ್ ಮಾಲವೀಯ ಯೋಗ ವಿಭಾಗದಿಂದ 'ಅರ್ಹತಾ ಪತ್ರ'. ಕರ್ನಾಟಕ ವಿಶ್ವವಿದ್ಯಾಲಯದ ಬಸವಾಧ್ಯಯನ ವಿಭಾಗದಿಂದ ಬಸವಾಧ್ಯಯನದಲ್ಲಿ 'ಅಧಿಕಾರ ಪತ್ರ'. ಕರ್ನಾಟಕ ವಿಶ್ವವಿದ್ಯಾಲಯದಿಂದ ಕನ್ನಡ ಎಂ.ಎ. (ದ್ವಿತೀಯ) ವರ್ಷದ ಅಧ್ಯಯನ. ಶ್ರೀ ಅಮರೇಶ್ವರ ಮಠದ ಪಟ್ಟಾಧಿಕಾರ ಸ್ವೀಕಾರ ದಿನಾಂಕ : ೩–೫–೧೯೯೩*

## ಬರೆದ ಕೃತಿಗಳು

೧) ಆತ್ಮಜ್ಯೋತಿ–ಅರಳಿ ನೀತಿ
೨) ಅದೇ ಹಾಡು
೩) ಶಿವಾನಂದ ಉವಾಚ
೪) ನವನೀತ ಪಂಚೀಕರಣ
೫) ನಮ್ಮ ಗಣಪತಿ ಹೀಗೋ !!
೬) ಸಾಯದ ಸಾವು ಮತ್ತು ಸ್ವರ್ಗಕ್ಕೆ ಪ್ರತಿಸ್ಪರ್ಧಿ
೭) ವಿಚಾರ ವೃಷ್ಟಿ [ಭಾಗ – ೧]
೮) ಶ್ರೀಶೈಲದ ಚೈತನ್ಯಶ್ರೀ
೯) The seat of Veerashaiva Faith
೧೦) ಬೋಧಗಂಗಾ

## ಅಚ್ಚಿನ ಮನೆಯಲ್ಲಿರುವ ಕೃತಿಗಳು

೧) ಲಿಂಗೈಕ್ಯ ಕಾಶೀ ಜಗದ್ಗುರು ಶ್ರೀ ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳು.
೨) ಏಳು, ಭಸ್ಮಧ್ವಜ !
೩) ಥೂ ! ಕ್ಷುದ್ರ
೪) ಅಥಾತೋ ಅಸ್ತ್ರ ಜಿಜ್ಞಾಸಾ...... ಇತ್ಯಾದಿ

**ವಿಳಾಸ :**

ಶ್ರೀ ಅಮರೇಶ್ವರ ಮಠ
**ಕೋಟೆಕಲ್ಲ–ಗುಳೇದಗುಡ್ಡ** – ೫೮೭ ೨೦೩
ತಾ. ಬಾದಾಮಿ ಜಿ. ವಿಜಾಪುರ
✆ : ೫೬೪ (ಎಸ್.ಟಿ.ಡಿ. : ೦೮೩೫೭)

## ಓದುವ ಮುನ್ನ .............

ವೀರಶೈವ ಧರ್ಮವು ಅತ್ಯಂತ ಪ್ರಾಚೀನವಾದದ್ದು ಎಂಬ ವಿಷಯವು ಭಾರತದ ಪ್ರಾಚೀನ ಇತಿಹಾಸದಿಂದ ತಿಳಿದುಬರುತ್ತದೆ. ವೀರಶೈವ ಧರ್ಮವನ್ನು ಸಂಸ್ಥಾಪಿಸುವ ಮೂಲಕ ಆದಿ ಜಗದ್ಗುರು ಪಂಚಪೀಠಾಧೀಶ್ವರರು ಭಾರತೀಯ ಸಂಸ್ಕೃತಿಯನ್ನು ಶ್ರೀಮಂತಿಸಿದ್ದಾರೆ. ಆಚಾರ-ವಿಚಾರ ಪ್ರಧಾನವಾದ ವೀರಶೈವ ಧರ್ಮವು ಭಾರತೀಯ ಇತಿಹಾಸದಲ್ಲಿ ತನ್ನದೇ ಆದ ಮಹತ್ತ್ವಪೂರ್ಣ ಪಾತ್ರವನ್ನಾಡಿದೆ. ಪಂಚಪೀಠಾಧೀಶ್ವರರು ವಿಶಾಲವಾದ ದೇಶದ ಉದ್ದಗಲಕ್ಕೂ ಸಂಚರಿಸಿ ವೀರಶೈವ ಸಿದ್ಧಾಂತವನ್ನು ಬೋಧಿಸಿ ಜನ-ಮನಗಳನ್ನು ತಣಿಸಿದ್ದಾರೆ. ಅವರು ನೆಲೆನಿಂತ ಸ್ಥಳಗಳು ಹಾಗೂ ಅವರು ಬೋಧಾಮೃತ ನೀಡಿದ ಸ್ಥಳಗಳು ಕ್ಷೇತ್ರಗಳೆನಿಸಿದವು ಮತ್ತು ಆರಾಧ್ಯವೆನಿಸಿ ಆರಾಧನೆಗೆ ಒಳಗಾದವು. ವೀರಶೈವರದು ಅತ್ಯಂತ ಸ್ವಚ್ಛ ಹಾಗೂ ಪಾರದರ್ಶಕ ಸ್ವಭಾವ. ತಮ್ಮ ಶಾಂತಿ, ಸಹನೆ ಹಾಗೂ ಭಕ್ತಿಪ್ರೇಮಗಳಿಗಾಗಿ ಅವರು ಹೆಸರುವಾಸಿಗಳಾಗಿದ್ದಾರೆ. ತಮ್ಮ ವಾಮ-ಕ್ಷೇಮಗಳನ್ನು, ಹಾನಿ-ವೃದ್ಧಿಗಳನ್ನು ಮತ್ತು ಮಾನಾಪಮಾನಗಳನ್ನು ಭಗವಂತನಿಗೇ ಅರ್ಪಿಸಿದ ಸಮರ್ಪಿತ ಸೌಜನ್ಯದ ಸಾಕಾರ ಮೂರ್ತಿಗಳು ಅವರು.

ಈ ಪುಸ್ತಕವು ಪಂಚಪೀಠಗಳ ಶ್ರೀಮಂತ ಪರಂಪರೆಯನ್ನು ಪರಿಚಯಿಸುವ ಒಂದು ಸರಳ ಪ್ರಯತ್ನದ ಸಾಕಾರ ರೂಪ. ಪಂಚ ಮಹಾಪೀಠಗಳ ಐತಿಹಾಸಿಕ ವೈಭವ, ತಮ್ಮ ವೈಯಕ್ತಿಕವನ್ನು ಮನರಂಜಿಸದೆ ನಾಡು-ನುಡಿಗಳ ಹಿತಕ್ಕಾಗಿ ವಿಶ್ವಕಲ್ಯಾಣಕ್ಕಾಗಿ ಅಧ್ವರ್ಯುಗಳಾಗಿ ನಿಂತುಕೊಂಡ ಪರಮಪೂಜ್ಯ ಗುರುಪೀಠ ಪರಂಪರೆ ಹಾಗೂ ಸದ್ಯದ ಪೀಠಾಧೀಶ್ವರರ ವ್ಯಕ್ತಿತ್ವದ ಕಿರು ಪರಿಚಯವನ್ನು ಈ ಗ್ರಂಥವು ಮಾಡಿಕೊಡುತ್ತದೆ. ಪಂಚಪೀಠಾಧೀಶ್ವರರು ವೀರಶೈವ ಸಮಾಜದ ಹಿತಕ್ಕಾಗಿ ಹಾಗೂ ನಾಡ- ಹೊರನಾಡ ಬಾಂಧವರ ಕಲ್ಯಾಣಕ್ಕಾಗಿ ಹಮ್ಮಿಕೊಂಡ ಯೋಜನೆಗಳು, ಕಾರ್ಯರೂಪಕ್ಕಿಳಿದ ಅವರ ಹತ್ತು ಹಲವು ಯೋಜನೆಗಳು...... ಇತ್ಯಾದಿಗಳ ಮೇಲೆ ಒಂದು ಪಕ್ಷಿನೋಟವನ್ನು ಇಲ್ಲಿ ಹರಿಸಲಾಗಿದೆ. ಪೀಠಾಚಾರ್ಯರ ಸಮಗ್ರ ವ್ಯಕ್ತಿತ್ವವನ್ನು 'ಶಬ್ದ-ಕಾರಾಗೃಹ'ದಲ್ಲಿ ಬಂಧಿಸಿ ನಿಲ್ಲಿಸುವದು ಅಷ್ಟೊಂದು ಸುಲಭದ ಮಾತಲ್ಲ. ಅವರ ಕೃಪಾಶೀರ್ವಾದದ ಬಲದಿಂದ ಅವರ ವ್ಯಕ್ತಿತ್ವವನ್ನು ಪರಿಚಯಿಸುವ 'ಕೈಂಕರ್ಯ'ಕ್ಕೆ ಸಿದ್ಧವಾಗಿ ಆ ದಿಶೆಯಲ್ಲಿ ಈ ಗ್ರಂಥವನ್ನು ರಚಿಸಲಾಗಿದೆ. ಕೇವಲ ಕೆಲವೇ ಕೆಲವು ಪುಟಗಳಲ್ಲಿ ಪೀಠಗಳ ಹಾಗೂ ಪೀಠಾಚಾರ್ಯರ ಸಮಗ್ರ ವ್ಯಕ್ತಿತ್ವವನ್ನು ಪರಿಚಯಿಸಬೇಕಾದ್ದರಿಂದ ಅವರ ಕುರಿತು ಸಾಕಷ್ಟು ವಿಷಯಗಳನ್ನು ಹೇಳುವುದಕ್ಕೆ ನಮಗೆ ಆಗಿರಲಿಕ್ಕಿಲ್ಲ. ಆದರೆ ಹೇಳಿದಷ್ಟು ವಿಷಯ ಮಾತ್ರ ಸ್ಪಷ್ಟ ಹಾಗೂ ನಿರ್ದಿಷ್ಟವಾಗಿದೆ ಎಂದು ಹೇಳಲು ಹೆಮ್ಮೆ ಎನಿಸುತ್ತದೆ.

ಈ ಗ್ರಂಥವನ್ನು ಬರೆಯುತ್ತಿರುವಾಗ ನಮ್ಮ ಅನೇಕ ಜನ ಆತ್ಮೀಯರು ನಮ್ಮನ್ನು ತಮ್ಮ ಹದುಳ ಇಚ್ಛೆ ಹಾಗೂ ಭಾವನೆಗಳಿಂದ ಉತ್ಸಾಹಿಸಿದ್ದಾರೆ. ಅವರೆಲ್ಲರೂ ಅಭಿನಂದನಾರ್ಹರು. ಅವರೆಲ್ಲರಿಗಾಗಿ ಒಂದು ಚಿಕ್ಕ 'ಕೃತಜ್ಞತಾ ಸಮಾರಂಭ'ವನ್ನು ಏರ್ಪಡಿಸಿ ಅವರನ್ನು ಅಭಿನಂದಿಸದೆ ಹಾಗೆಯೇ ಮುಂದುವರಿದರೆ ನಮ್ಮನ್ನು ಅನಂತರ 'ಅಪರಾಧೀ ಪ್ರಜ್ಞೆ'ಯು ಸತಾಯಿಸುತ್ತದೆ. ಅದಕ್ಕಾಗಿ ಓದುಗರಲ್ಲಿ ಒಂದು ಚಿಕ್ಕ ನಿವೇದನೆ. ಈ ಕೃತಜ್ಞತಾ ಸಮಾರಂಭ ಮುಗಿಯುವವರೆಗೆ ನಮ್ಮೆಲ್ಲ ಓದುಗರು ತಮ್ಮ ತಾಳ್ಮೆಯ ಕ್ಷಿತಿಜವನ್ನು ಕೆಲಮಟ್ಟಿಗೆ ವಿಸ್ತರಿಸಿಕೊಂಡು ನಮ್ಮೊಂದಿಗೆ ಸಹಕರಿಸಬೇಕೆಂದು ಕೇಳಿಕೊಳ್ಳುತ್ತೇವೆ.

ಪ್ರಪ್ರಥಮದಲ್ಲಿ ವರ್ತಮಾನ ಪಂಚಪೀಠಾಧೀಶ್ವರರು ತಮ್ಮ ಸಮಗ್ರ ಜೀವನವನ್ನು ನಮಗೆ ಪರಿಚಯಿಸಿ ಈ ಕಾರ್ಯವನ್ನು ಮಾಡಲು ನಮ್ಮನ್ನು ಪ್ರೇರೇಪಿಸಿ ಪ್ರೋತ್ಸಾಹಿಸಿದ್ದಾರೆ. ಪಂಚಪೀಠಾಧೀಶ್ವರರ ಜೀವನವನ್ನು ಭಕ್ತ ಜನಗಳಿಗೆ ಪರಿಚಯಿಸಿ ಕೊಡುವ 'ಸಾಹಿತ್ಯ-ಸೇವಾ ಸೌಭಾಗ್ಯ'ವನ್ನು ನಮ್ಮದನ್ನಾಗಿಸಿದ್ದಾರೆ. ಆದ್ದರಿಂದ ಎಲ್ಲಕ್ಕೂ ಮೊದಲು ಪರಮಪೂಜ್ಯ ಪಂಚಪೀಠಾಧೀಶ್ವರರ ಪರಮ ಪವಿತ್ರ ಪದತಲದಲ್ಲಿ ನಾವು ಕೃತಜ್ಞತಾಪೂರ್ವಕ ಹಣೆಮಣಿದು ಈ ಕೃತಜ್ಞತಾ ಸಮಾರಂಭಕ್ಕೆ ಮೊದಲುಮಾಡುತ್ತೇವೆ.

ಮಾನವಧರ್ಮ ಸಂಸ್ಥೆಯ ವರ್ತಮಾನ ಸಮಯದ ಅಧ್ಯಕ್ಷರಾದ ಶ್ರೀಮದ್ ರಂಭಾಪುರೀ ವೀರ ಸಿಂಹಾಸನಾಧೀಶ್ವರ ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು ಪ್ರಸನ್ನ ರೇಣುಕ ವೀರ ಸೋಮೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳು ಮತ್ತು ಕಾಶೀ ಜ್ಞಾನಸಿಂಹಾಸನಾಧೀಶ್ವರ ಪರಮಪೂಜ್ಯ ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು ಡಾ. ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳು ಹಾಗೂ ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ ಪರಮಪೂಜ್ಯ ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು ಉಮಾಪತಿ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳವರು ಶ್ರೀ ಜಗದ್ಗುರು ಪಂಚಾಚಾರ್ಯ ಮಾನವ ಧರ್ಮ ಸಂಸ್ಥೆಯಿಂದ ಪ್ರಕಟವಾಗುತ್ತಿರುವ ಈ ಪ್ರಪ್ರಥಮ ಸಾಹಿತ್ಯ ಕೃತಿಯ ಕುರಿತು ವಿಶೇಷ ಆಸಕ್ತಿಯನ್ನು ವಹಿಸಿ ನಮ್ಮ ಮನೋಬಲವನ್ನು ಮತ್ತು ಆತ್ಮಸ್ಥೈರ್ಯವನ್ನು ಹೆಚ್ಚಿಸಿ ಹುರಿದುಂಬಿಸಿದ್ದಾರೆ. ಅವರ ಶ್ರೀಚರಣಂಗಳಲ್ಲಿ ಇನ್ನೊಮ್ಮೆ ಭಕ್ತಿಪೂರ್ವಕವಾಗಿ ನಮಸ್ಕರಿಸುತ್ತೇವೆ.

ಇದು ಶ್ರೀ ಜಗದ್ಗುರು ಪಂಚಾಚಾರ್ಯ ಮಾನವಧರ್ಮ ಸಂಸ್ಥೆಯ 'ಸಾಹಿತ್ಯ-ವೇದಿಕೆ'ಯಿಂದ ಹೊರ ಬರುತ್ತಿರುವ ಪ್ರಪ್ರಥಮ ಕೃತಿ-ಕುಸುಮ. ಆದ್ದರಿಂದ ಶ್ರೀ ಜಗದ್ಗುರು ಪಂಚಾಚಾರ್ಯ ಮಾನವಧರ್ಮ ಸಂಸ್ಥೆಗೆ ಮತ್ತು ಅದರ ಕಾರ್ಯಕಾರಿ ಸಮಿತಿಗೆ ಕೃತಜ್ಞತೆ ಹೇಳದೆ ಮುಂದೆ ಸಾಗಿದರೆ 'ಕೃತಘ್ನತೆ'ಯ ಪಟ್ಟ ನಮ್ಮನ್ನು ಅಟ್ಟಿಕೊಂಡು ಬಂದೀತು ! ಆ ಸಂಸ್ಥೆಯ ಕಾರ್ಯಾಡಳಿತ ಸಿಬ್ಬಂದಿಯನ್ನೆಲ್ಲ ನಾವು ತುಂಬು ಹೃದಯದಿಂದ ಅಭಿನಂದಿಸುತ್ತೇವೆ.

ಈ ಗ್ರಂಥವನ್ನು ಬರೆಯುವಾಗ ನಮ್ಮನ್ನು ಮಾನಸಿಕವಾಗಿ ಸಿದ್ಧಗೊಳಿಸಿದ ಹಾಗೂ ನಮಗೆ ಎಲ್ಲ ವಿಧವಾದ ಅನುಕೂಲತೆಗಳನ್ನು ಕಲ್ಪಿಸಿಕೊಟ್ಟ ನಮ್ಮ ಶ್ರೀ ಅಮರೇಶ್ವರ ಮಠದ ಅನ್ನಪೂರ್ಣೆ ಮಾತೋಶ್ರೀ ಶ್ರೀಮತಿ ಲಕ್ಷ್ಮೀಬಾಯಿ ಅಮ್ಮನವರನ್ನು, ಶ್ರೀಮಠದ ಕರ್ಮಯೋಗಿ ಶ್ರೀ ಬಸಯ್ಯ ಸ್ವಾಮಿಗಳನ್ನು ಈ ಸಂದರ್ಭದಲ್ಲಿ ನಾವು ಸ್ಮರಿಸಿಕೊಳ್ಳದೆ ಇರಲಾರೆವು. ಈ ಕೃತಿಯ ರಚನಾ ಕಾರ್ಯದಲ್ಲಿ ನಾವು ತೊಡಗಿಕೊಂಡಿರುವಾಗ ಆಗಾಗ ದೂರವಾಣಿಯ ಮೂಲಕ ನಮ್ಮನ್ನು ಸಂಧಿಸಿ ಮತ್ತು ಸಂಪರ್ಕಿಸಿ ಆದಷ್ಟು ತ್ವರಿತವಾಗಿ ಮತ್ತು ಅಚ್ಚುಕಟ್ಟಾಗಿ ಈ ಕೃತಿಯನ್ನು ಹೊರತರಲು ನಮ್ಮನ್ನು ಹುರಿದುಂಬಿಸಿದ ಹಾಗೂ ನಮ್ಮಲ್ಲಿನ ಉತ್ಸಾಹದ ಉತ್ಸಾಹವನ್ನು ವರ್ಧಿಸಿದ ನಮ್ಮ ಪೂರ್ವಾಶ್ರಮದ ತಂದೆ-ತಾಯಿಗಳಾದ ಶ್ರೀಯುತ ಎಸ್. ಎಂ. ಮಠ ಹಾಗೂ ಶ್ರೀಮತಿ ಶಾಂತಾ ಎಸ್. ಮಠ ಇವರನ್ನು ಹಾಗೂ ಇವರ ಭಾವ-ಭಾವನೆಗಳನ್ನು ಅಭಿನಂದಿಸದೆ ಇರಲಾರೆವು.

ಈ ಗ್ರಂಥದ ಕರಡು ಪ್ರತಿಯನ್ನು ಬರೆಯುವ ಹಾಗೂ ಅಚ್ಚುದೋಷಗಳನ್ನು ಅವಲೋಕಿಸುವ ಸಂದರ್ಭದಲ್ಲಿ ನಮ್ಮ ಜೊತೆಯಲ್ಲಿದ್ದು ನಮಗೆ ಸಹಾಯ ಮಾಡಿದ ಮತ್ತು ನಮ್ಮ ಲವಲವಿಕೆಯನ್ನು ಹೆಚ್ಚಿಸಿದ ಕವಲೇದುರ್ಗ ಮಹಾಮಹತ್ತಿನ ಭುವನಗಿರಿ ಸಂಸ್ಥಾನಮಠದ ಉತ್ತರಾಧಿಕಾರಿಗಳಾದ ಶ್ರೀ ಸಿದ್ಧಲಿಂಗ ದೇವರು ಎಂ.ಎ.(ಕನ್ನಡ) ಇವರು ಕೂಡ ಕೃತಜ್ಞತಾಪಾತ್ರರಾಗಿದ್ದಾರೆ. ಈ ಗ್ರಂಥಕಾರ್ಯವು ತನ್ನ ಪರಾಕಾಷ್ಠೆಯ ಸನ್ನಿವೇಶವನ್ನು ತಲುಪಿ ಅಂತಿಮ-ಸ್ಪರ್ಶವನ್ನು ಪಡೆಯುತ್ತಿರುವಾಗ ಒಂದು ಸಪ್ತಾಹ ಪರ್ಯಂತರ ನಮ್ಮ ಜೊತೆಯಲ್ಲಿದ್ದು ಪಂಚಪೀಠಗಳ ಮತ್ತು ಪಂಚ ಪೀಠಾಧೀಶ್ವರರ ಸೇವೆಯನ್ನು ಮಾಡಿದ್ದಾರೆ. ಆದ್ದರಿಂದ ಅವರನ್ನು ಕೂಡ ಈ ಸಂದರ್ಭದಲ್ಲಿ ನಾವು ತುಂಬು ಹೃದಯದಿಂದ ಹರಸಿ ಅಭಿನಂದಿಸುತ್ತಲಿದ್ದೇವೆ. ಉಜ್ಜಯಿನಿ ಶ್ರೀಪೀಠದ ಕುರಿತು ಬರೆಯುತ್ತಿರುವಾಗ ಆ ಪೀಠದ ಕುರಿತು ಕೆಲವು ವಿವರಗಳನ್ನು ನಮಗೆ ಒದಗಿಸಿಕೊಟ್ಟು ಉಪಕರಿಸಿದ ಕೊಟ್ಟೂರಿನ ಡೋಣೂರು-ಚಾನುಕವಟೆ ಶ್ರೀಮಠದ ಪಟ್ಟಾಧ್ಯಕ್ಷರಾದ ಹಾಗೂ ನಮ್ಮ ಆತ್ಮೀಯ ಮಿತ್ರರಾದ ಶ್ರೀ ಷ. ಬ್ರ. ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳು ಎಂ.ಎ. (ಸಂಸ್ಕೃತ) ಇವರನ್ನು ಕೂಡ ಈ ಸಂದರ್ಭದಲ್ಲಿ ನಾವು ಅಭಿನಂದಿಸದೆ ಇರಲಾರೆವು.

ಈ ಗ್ರಂಥವನ್ನು ಮುದ್ರಿಸುವ ಕಾರ್ಯದಲ್ಲಿ ಅತ್ಯಂತ ಆತ್ಮೀಯತೆಯಿಂದ ಸೇವೆ ಮಾಡಿದ ನಮ್ಮ ಶ್ರೀಮಠದ ಪರಮಭಕ್ತರಾದ ಗುಳೇದಗುಡ್ಡದ ಶ್ರೀ ವೀರಭದ್ರಪ್ಪಾ ಬಳಿಗಾರ ಇವರನ್ನು ಸ್ಮರಿಸದೆ ಇರಲಾಗದು. ಇವರು ನಾವು ಬರೆದ ಹಸ್ತಪ್ರತಿಯನ್ನು ಬೆರಳಚ್ಚು ಯಂತ್ರದಲ್ಲಿ ಅಚ್ಚಿಸಿಕೊಂಡು ಅದನ್ನು ಮುದ್ರಣಾಲಯಕ್ಕೆ ತಲುಪಿಸುವ ಹಾಗೂ ತತ್ಸಂಬಂಧೀ ಇತರ ಕೆಲಸಗಳ ಉಸ್ತುವಾರಿಯನ್ನು ನೋಡಿ

ಕೊಳ್ಳುವ ಕಾರ್ಯವನ್ನು ತುಂಬಾ ದಕ್ಷತೆಯಿಂದ ಮಾಡಿದ್ದಾರೆ. ಅವರನ್ನು ಕೂಡ ನಾವು ಈ ಕೃತಜ್ಞತಾ ಸಮಾರಂಭದಲ್ಲಿ ತುಂಬು ಹೃದಯದಿಂದ ಸ್ಮರಿಸಿ ಆಶೀರ್ವದಿಸುತ್ತಲಿದ್ದೇವೆ. ಈ ಗ್ರಂಥಕ್ಕೆ ಪಂಚಪೀಠಾಧೀಶ್ವರರ ಸುಂದರವಾದ ಛಾಯಾಚಿತ್ರವನ್ನು ಬರೆದು ಆಕರ್ಷಕ ಮುಖಪುಟವನ್ನು ಸಿದ್ಧಗೊಳಿಸಿ ಶಿವಕಾಶಿಯಿಂದ ಅದನ್ನು ಮುದ್ರಿಸಿ ತಂದುಕೊಟ್ಟ ಬೆಂಗಳೂರಿನ ಕಲಾವಿದ ಕುಂಚಬ್ರಹ್ಮಶ್ರೀ ಯಶವಂತ ಹಿಬಾರೆ ಇವರನ್ನು ಕೂಡ ತುಂಬು ಹೃದಯದಿಂದ ಈ ಸುಂದರ್ಭದಲ್ಲಿ ಸ್ಮರಿಸಿಕೊಂಡು ಅಭಿನಂದಿಸುತ್ತಲಿದ್ದೇವೆ. ಈ ಗ್ರಂಥವನ್ನು ತಮ್ಮ ಆಫ್‌ಸೆಟ್ ಮುದ್ರಣಾಲಯದಲ್ಲಿ ಸುಂದರವಾಗಿ ಮತ್ತು ಸ್ವಚ್ಛವಾಗಿ ಮುದ್ರಿಸಿಕೊಟ್ಟ ಗುಳೇದಗುಡ್ಡದ ಪ್ರೇಕ್ಷಣೀಯ ಸ್ಥಳಗಳಲ್ಲೊಂದೆನಿಸಿದ ಶ್ರೀ ಸಂಗಮೇಶ ಆಫ್‌ಸೆಟ್ ಪ್ರಿಂಟರ್ಸನ ಮಾಲಿಕರನ್ನು ಹಾಗೂ ಅವರ ಸಿಬ್ಬಂದಿ ವರ್ಗದವರನ್ನು ನಾವು ತುಂಬು ಹೃದಯದಿಂದ ಅಭಿನಂದಿಸಿ ಆಶೀರ್ವದಿಸುತ್ತಲಿದ್ದೇವೆ.

ಇನ್ನು, ಈ ಕೃತಜ್ಞತಾ ಸಮಾರಂಭದ ಕೊನೆಯಲ್ಲಿ ಈ ಗ್ರಂಥವನ್ನು ಭಕ್ತಿಯಿಂದ ಕೈಗೆತ್ತಿಕೊಂಡು ಓದಿ ಪಂಚಪೀಠಗಳ ಪರಿಚಯವನ್ನು ಹಾಗೂ ಪಂಚಪೀಠಾಧೀಶ್ವರರ ಜೀವನವನ್ನು ಯಥಾರ್ಥವಾಗಿ ತಿಳಿದು ಸ್ಫೂರ್ತಿ ಪಡೆಯುವ ಹಾಗೂ ಅವರಲ್ಲಿನ ಭಕ್ತ್ಯಾದರಗಳನ್ನು ದ್ವಿಗುಣಿತ, ತ್ರಿಗುಣಿತ ಮತ್ತು ಅನಂತಗೊಳಿಸಿಕೊಳ್ಳುವ ಎಲ್ಲ ಅಭಿಮಾನಿ ಭಕ್ತವೃಂದವನ್ನು ಹಾಗೂ ಕನ್ನಡ ನಾಡಜನತೆಯನ್ನು ಅಭಿನಂದಿಸದೆ ಇದ್ದರೆ ಈ ನಮ್ಮ ಕೃತಜ್ಞತಾ ಸಮಾರಂಭಕ್ಕೆ ಅರ್ಥವಿಲ್ಲದಂತಾಗುತ್ತದೆ. ಆದ್ದರಿಂದ ನಾವು ಅಂಥ ಹಾರ್ದಿಕ ಭಕ್ತ–ಮಾನಸವನ್ನು ಹಾಗೂ ಆಸಕ್ತ ಜನತೆಯನ್ನು ಅಭಿನಂದಿಸದೆ ಇರಲಿಕ್ಕೆ ಆಗುತ್ತದೆಯೇ? ನೀವೇ ಹೇಳಿ........✍

–ಡಾ. ಶಿವಾನಂದ ಶಿವಾಚಾರ್ಯರು

|| ಓಂ ||

# ಶ್ರೀಮದ್ ರಂಭಾಪುರೀ ವೀರ ಸಿಂಹಾಸನಾಧೀಶ್ವರ ಶ್ರೀಶ್ರೀಶ್ರೀ ೧೦೦೮ ಜಗದ್ಗುರು ಪ್ರಸನ್ನ ರೇಣುಕ ವೀರ ಸೋಮೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳು

## ಸೃಷ್ಟಿ ಸೌಂದರ್ಯದ ಮಡಿಲಲ್ಲಿ :

### ಹದುಳ ಬನ್ನಿ ಮಲಯಾಚಲಕೆ

"ಅದೋ ನೋಡಿ ಅಲ್ಲಿದೆ ಮಲಯಾಚಲ ತಪೋಭೂಮಿ
ರೇಣುಕಾದಿ ಜಗದ್ಗುರುಗಳ ಸಾಧನೆಯ ಪುಣ್ಯಭೂಮಿ
ಬನ್ನಿ, ಕಣ್ತೆರೆದು ಕಣ್ತುಂಬ ನೋಡ ಬನ್ನಿ.......
ಬಾಳೆಹೊನ್ನೂರಿನೊಳು ರಾರಾಜಿಸುವ ವೀರ–ಗೋತ್ರಜರ ವೀರಪೀಠವನು
ವೀರಶೈವರ ಧರ್ಮಕ್ಷೇತ್ರವನು.

ಪರಶಿವನ ಸದ್ಯೋಜಾತ ಮುಖಸಂಜಾತರ ಪುಣ್ಯತಾಣವನು
ಭೂರ್ಭುವಾದಿ ಸಪ್ತ ಊರ್ಧ್ವಲೋಕಗಳನು
ಅತಳವಿತಳಾದಿ ಸಪ್ತ ಅಧೋಲೋಕಗಳನು
ಸುರಾಸುರ, ನರ–ನಾರಿ, ಪಾಮರ–ಪಂಡಿತರನು
ಉದ್ಧರಿಸಿದ ರೇಣುಕ ರೇವಣಾದಿ ಸಿದ್ಧ–ಪ್ರಸಿದ್ಧರು ತಪಗೈದ ಗುರುಕ್ಷೇತ್ರವನು.

'ಮಾನವ ಧರ್ಮಕ್ಕೆ ಜಯವಾಗಲಿ,
ಧರ್ಮದಿಂದಲೇ ವಿಶ್ವಕ್ಕೆ ಶಾಂತಿ' ಎಂಬೀ
ಧರ್ಮಕಹಳೆಯನ್ನು ಊದಿದವರ,
ಶಾಂತಿಮಂತ್ರವನು ಪಠಿಸಿದವರ ಜ್ಞಾನದೇಗುಲವನು
ನೋಡ ಬನ್ನಿ, ಓಡಿ ಬನ್ನಿ, ನೋಡಲೋಡಿ ಬನ್ನಿ
ಜಗದ್ಗುರುಗಳ ಶ್ರೀರಕ್ಷೆಯ ಅಡಿಯೊಳು ನಿಲ್ಲಬನ್ನಿ...........
ಒಲವಿಂದ ಬನ್ನಿ, ಗುರು ಒಲುಮೆಯ ಪಡೆಯ ಬನ್ನಿ"

## ನಿರಾಮಯ ಮತ್ತು ನಿರಾಳ :

ಮನುಷ್ಯನ ಸದ್ದು–ಗದ್ದಲಗಳಿಲ್ಲದ, ಧ್ವನಿ–ಪ್ರತಿಧ್ವನಿಗಳ ಅಬ್ಬರವಿಲ್ಲದ

ದಾಳಿ–ಪ್ರತಿದಾಳಿಗಳ ಆತಂಕವಿಲ್ಲದ ನಿರಾತಂಕ ನಿರಾಳ ಸ್ಥಳ! ಅದೋ ನೋಡಿ, ಕೋಗಿಲೆಗಳ ಕೂಜನ ಕಿವಿ ತುಂಬುತ್ತಲಿದೆ. ಪಕ್ಷಿಗಳ ಮೃದು ಮಧುರ ಇಂಚರವು ಮುಕ್ತವಾಗಿ ಸಂಚರಿಸಿಕೊಂಡಿದೆ. ಅದೋ ಅಲ್ಲಿ, ಆಕಾಶದ ಎತ್ತರವನ್ನು ಅಳೆಯಲು ತವಕಿಸುತ್ತಿರುವ ಬಾನಿನೆತ್ತರಕ್ಕೆ ಬೆಳೆದ ಮರ–ಮಾಮರಗಳು! ಜುಳು ಜುಳು ಹರಿಯುವ 'ಭದ್ರಾ' ನದಿಯ ಪಾರದರ್ಶಕ ನೀರು ಎಷ್ಟೊಂದು ವೈಯಾರದಿಂದ ಹರಿಯುತ್ತಲಿದೆ !! ನೋಡಿ, ಆ ಬತ್ತದ ಗದ್ದೆಗಳು ಭೂದೇವಿಯು ತನ್ನ ಎದೆಯ ಮೇಲೆ ಹೊದ್ದುಕೊಂಡಿರುವ ಹಸಿರು ವರ್ಣದ ಉತ್ತರೀಯದಂತೆ ಕಾಣುತ್ತಲಿವೆ. ಆ ಹಸಿರು ಹಸಿರಾದ 'ವನಶ್ರೀ' ಭೂದೇವಿಯ ಅಂದ–ಚೆಂದಗಳನ್ನು ಇಮ್ಮಡಿ ಮುಮ್ಮಡಿಗೊಳಿಸಿ ಮುದವನ್ನುಂಟುಮಾಡುತ್ತಲಿದೆ. ಚುಕ್ಕೆ–ಚಂದ್ರಮರನ್ನು ಚುಂಬಿಸಲು ಲಾಲಾಯಿತವಾಗಿರುವ ಆ ಪರ್ವತ ಶ್ರೇಣಿಗಳು, ಆ ಬೆಟ್ಟ–ಗುಡ್ಡಗಳು ಪರಸ್ಪರವಾಗಿ ಸ್ಪರ್ಧೆಗೆ ಇಳಿದಂತಿವೆ. ಕೊಳ್ಳ–ಕಾಲುವೆಗಳಲ್ಲಿ ಹರಿಯುತ್ತಿರುವ ಆ ನೀರು ಸದ್ದು ಮಾಡುತ್ತ ಮುಂದೆ ಮುಂದೆ ಹರಿಯುತ್ತಲಿದೆ. ಮಲಯಾಚಲದ ಮೇಲೆ ಹಾದು ಬರುವ ಆ ತಂಗಾಳಿ ಮನಸ್ಸಿಗೆ ಆಹ್ಲಾದವನ್ನು ಉಂಟು ಮಾಡುತ್ತಲಿದೆ.

ಪ್ರಪಂಚದ ಸಂಕಟ–ಸಂತಾಪಗಳಿಂದ ಬಹುದೂರದಲ್ಲಿದ್ದುಕೊಂಡು ಮನುಷ್ಯನಿಗೆ ಅಲೌಕಿಕ ಆನಂದದ ಅನುಭವವನ್ನು ಪರಿಚಯಿಸುತ್ತಲಿದೆ ಈ ರಮ್ಯ ಮನೋಹರ ರಮಣೀಯ ಸ್ಥಳ ! ಪಟ್ಟಣದ ಸಂಚು–ಹೊಂಚು–ವಂಚನೆಗಳ ಕಣ್ಣುಮುಚ್ಚಾಲೆಯಾಟ ಇಲ್ಲಿಲ್ಲ. ಅಹಂಕಾರ, ಅಸೂಯೆ, ಅಬ್ಬರಗಳ ಅಟ್ಟಹಾಸವಿಲ್ಲ. ಈ ಪರಮ ಪವಿತ್ರ ಪ್ರಶಾಂತ ಪರಿಸರವು ದುಃಖಿತರ ದುಃಖವನ್ನು ದೂರಮಾಡುತ್ತದೆ. ನೊಂದವರ ಮತ್ತು ನಂಜುಂಡವರ ನೋವು–ನಂಜುಗಳ ಬೇರನ್ನೇ ಕಿತ್ತೆಸೆಯುತ್ತದೆ ಈ ನಿರಾಮಯ ನಿರಾಳ ನಿಶ್ಚಿಂತ ನಿಸರ್ಗ !!

## ರಂಭಾಪುರಿ ಶ್ರೀಪೀಠ :

ಅತ್ತ ನೋಡಿ, ಪ್ರಕೃತಿ ಮಾತೆಯ ವಿರಾಟ್–ಬಾಹುಗಳ ಮಧ್ಯದಲ್ಲಿ ವಿರಾಜಿಸುತ್ತಿರುವ ಮತ್ತು ವಿಜೃಂಭಿಸುತ್ತಿರುವ ವೀರಶೈವರ ವೀರಪೀಠವನ್ನು! ವೀರಶೈವರ ವೀರ ಸಿಂಹಾಸನವನ್ನು!! ನಿಸರ್ಗ ದೇವತೆಯ ಅಂತಃಪುರದಲ್ಲಿ ಮತ್ತು ಅಂತರಂಗದಲ್ಲಿ ಆರೂಢವಾಗಿ ನಿಂತುಕೊಂಡಿದೆ ನಮ್ಮ ಶ್ರೀಮದ್ ರಂಭಾಪುರಿಯ ಶ್ರೀಪೀಠ. ವೀರಶೈವರ ಗುರಿ–ಗಂತವ್ಯಗಳ ಮಾತೃಸ್ಥಾನ. ಶಿವ–ಜೀವೈಕ್ಯ ವಿದ್ಯೆಯಲ್ಲಿ ರಮಿಸುವ ವೀರಶೈವರ ಪರಮ ಪವಿತ್ರ ಆರಾಧ್ಯ ಸ್ಥಳ ! ವೀರಶೈವರ ಭಾವನಾ–ಪ್ರಪಂಚದಲ್ಲಿ ಬಲುಭದ್ರವಾಗಿ ಬೇರೂರಿದ ಪರಮಪೂಜ್ಯ ಗುರುಕ್ಷೇತ್ರ !! ಕರ್ನಾಟಕ ರಾಜ್ಯದ ಚಿಕ್ಕಮಗಳೂರು ಜಿಲ್ಲೆಯ ಪುಣ್ಯವನ್ನು ವರ್ಧಿಸಿದ ಪರಮ ಪಾವನ ಪುಣ್ಯಧಾಮ. ಪ್ರಕೃತಿ ಮಾತೆಯ ಚೆಲುವೆಲ್ಲ ಇಲ್ಲಿ ಕೇಂದ್ರೀಕೃತವಾಗಿದೆಯಲ್ಲವೇ ? ಭದ್ರಾನದಿಯ

ತಟಾಕದಲ್ಲಿರುವ ಶ್ರೀಪೀಠವು ಮತಿ–ಮನಗಳಿಗೆ ಸುಖಾನುಭವದ ಸಂಸ್ಪರ್ಶವನ್ನು ಮಾಡಿಸುತ್ತದೆ. ವೀರಶೈವರ ಪಂಚಪೀಠಗಳಲ್ಲಿ ಒಂದಾದ ಶ್ರೀ ರಂಭಾಪುರಿ ಪೀಠವು ತನ್ನ ಹಿರಿಮೆ–ಗರಿಮೆಗಳಿಂದ ಋಷಿ–ಮುನಿಗಳನ್ನೇ ಮೋಹಕ್ಕೆ ಒಳಗು ಮಾಡಿದೆ. ಗಜ–ದಿಗ್ಗಜರ ಗರ್ವವನ್ನು ಮೃದುಗೊಳಿಸಿದೆ. ರಂಭಾಪುರಿ ಶ್ರೀಪೀಠದ ಘನತೆಯ ಎದುರು ಯಾರ ತಲೆಯಾದರೂ ಬಾಗುತ್ತದೆ. ಶ್ರೀಪೀಠದ ಮಹಿಮೆಯೇ ಅಂಥಹದು. ಬನ್ನಿ, ಶ್ರೀಪೀಠದ ಇತಿಹಾಸದ ಪುಟಗಳ ಒಳಹೊಕ್ಕು ಅದರ ಅಂತರಂಗದ ಯಾತ್ರೆ ಮಾಡಿ ಬರುವಾ.

## ಅಂತರಂಗ–ಯಾತ್ರೆ :

ಪರಶಿವನ ಸದ್ಯೋಜಾತ ಮುಖಸಂಜಾತರಾದ ಶ್ರೀ ಜಗದ್ಗುರು ರೇಣುಕ ಗಣಾಧೀಶ್ವರರು ಶ್ರೀ ರಂಭಾಪುರಿ ಪೀಠದ ಆದಿ ಆಚಾರ್ಯರು. ಶಿವನ ಆಜ್ಞೆಯನ್ನು ಪರಿಪಾಲಿಸುವದಕ್ಕೋಸ್ಕರ ಆತನ ಆದೇಶವನ್ನು ತಲೆಯ ಮೇಲೆ ಹೊತ್ತು ಲಿಂಗ–ಗರ್ಭದಿಂದ ಹೊರಬಂದವರು ಅವರು. ಆದಿ ಜಗದ್ಗುರುಗಳು ಅಂಗೋದ್ಭವರಲ್ಲ; ಅವರು ಲಿಂಗೋದ್ಭವರು ! ಅವರು ಅಂಗ–ಸಂಜಾತರಲ್ಲ; ಲಿಂಗ–ಸಂಜಾತರು !! ಭೂಲೋಕದಲ್ಲಿನ ಶ್ರೀ ಕೊಲನುಪಾಕದ (ಕೊಲ್ಲಿಪಾಕಿ)* ಶ್ರೀ ಸೋಮೇಶ್ವರ ಲಿಂಗದಿಂದ ಉದ್ಭವಿಸಿದ ಅವರು ಕೃತಯುಗದಲ್ಲಿ ಶ್ರೀ ಏಕಾಕ್ಷರ ಶಿವಾಚಾರ್ಯರೆಂದು, ತ್ರೇತಾಯುಗದಲ್ಲಿ ಶ್ರೀ ಏಕವಕ್ತ್ರ ಶಿವಾಚಾರ್ಯರೆಂದು, ದ್ವಾಪರಯುಗದಲ್ಲಿ ಶ್ರೀ ರೇಣುಕಾಚಾರ್ಯರೆಂದು ಮತ್ತು ಕಲಿಯುಗದಲ್ಲಿ ಶ್ರೀ ರೇವಣಸಿದ್ಧರೆಂದು ಖ್ಯಾತರಾದರು. ಪರಮಪೂಜ್ಯ ಜಗದ್ಗುರುಗಳು ಲೋಕೋದ್ಧಾರಕ್ಕಾಗಿ ಮತ್ತು ಧರ್ಮ–ಸಂಸ್ಥಾಪನೆಗಾಗಿ ಎಲ್ಲಿಂದಲೋ ಇಳಿದು ಬಂದವರಲ್ಲ; ಅವರು ಇಲ್ಲಿಂದಲೇ ಎದ್ದು ಬಂದವರು ! ದುಷ್ಟನಿಗ್ರಹ ಮತ್ತು ಶಿಷ್ಟಾನುಗ್ರಹಕ್ಕಾಗಿ ಲಿಂಗದೊಡಲಿನಿಂದ ಒಡಮೂಡಿ ಬಂದವರು ಅವರು !!

## ನೊಂದವರ ಬಾಂಧವರು :

ವೀರಶೈವ ಮಹಾಮತ ಸಂಸ್ಥಾಪನೆಗಾಗಿ ಮತ್ತು ಅಧರ್ಮದ ಗ್ಲಾನಿಗಾಗಿ ಯುಗ–ಯುಗಗಳಲ್ಲಿ ಸಂಭವಿಸಿ ಜನ–ಮಾನಸವನ್ನು ಎಚ್ಚರಿಸಿದ ಯುಗಪುರುಷರು ಅವರು. ದೇಹವನ್ನು ದೇಗುಲವನ್ನಾಗಿಸಿದ ಮತ್ತು ಜ್ಞಾನವನ್ನು ಜಂಗಮಿಸಿದ ಕೀರ್ತಿಕಾಯರು ಶಿವಾದ್ವೈತ ಸಿದ್ಧಾಂತವನ್ನು ಬೋಧಿಸುತ್ತ ದೇಶಸಂಚಾರ ಮಾಡಿದರು. ಮನೆಮನೆಗಳಲ್ಲಿ ವೀರಶೈವ ಜ್ಞಾನಜ್ಯೋತಿಗಳನ್ನು ಬೆಳಗಿಸಿದರು. ನಾಡು–ನುಡಿಗ

---

** ಕೊಲ್ಲಿಪಾಕಿ ಅಥವಾ ಕೊನಲ್‌ಪಾಕ್ ಸುಕ್ಷೇತ್ರ: ಆಂಧ್ರಪ್ರದೇಶದ ರಾಜಧಾನಿಯಾದ ಹೈದರಾಬಾದದಿಂದ ಭುವನಗಿರಿ ಮಾರ್ಗವಾಗಿ ಆಲೇರಿಯು (ತಾಲ್ಲೂಕಾ ಕೇಂದ್ರ; ನಲಗೊಂಡಾ ಜಿಲ್ಲೆ) ಅರವತ್ತೆಂಟು ಕಿ.ಮೀ. ದೂರದಲ್ಲಿದೆ. ಈ ಆಲೇರಿಯಿಂದ ಶ್ರೀ ಸೋಮೇಶ್ವರ ಲಿಂಗವಿರುವ ಕೊನಲ್‌ಪಾಕ್ ಸುಕ್ಷೇತ್ರವು ಐದು ಕಿ.ಮೀ. ದೂರದಲ್ಲಿರುತ್ತದೆ.*

ಳನ್ನು ವೀರಶೈವ ಸಾಹಿತ್ಯದಿಂದ ಶ್ರೀಮಂತಿಸಿದರು. ಪರಮಪೂಜ್ಯ ಜಗದ್ಗುರುಗಳು ದೇಶ-ದೇಶಾಂತರಗಳಲ್ಲಿ ಸಂಚರಿಸುತ್ತ ಧರ್ಮಪ್ರಸಾರವನ್ನು ಮಾಡಿದರು. ವಸುಧೈವ ಕುಟುಂಬಕರಾದ ಅವರಿಗೆ ಜಗವೇ ಮನೆ, ಜೀವಿಗಳೆಲ್ಲ ಆಪ್ತರು. ನೊಂದವರೇ ಅವರ ಬಾಂಧವರು. ನುಡಿ-ಗಡಿಗಳ ಭೇದ-ಭಾವ ಅವರಲ್ಲಿಲ್ಲ. ಆ ಪ್ರಾಂತ, ಈ ಪ್ರಾಂತ ಎಂಬ ಭೇದ ಸಾಮಾನ್ಯರಲ್ಲಿ; ಅಸಾಮಾನ್ಯರಲ್ಲಿ ಅದಕ್ಕವಕಾಶವೇ ಇಲ್ಲ. ದು:ಖಿತರ ಮತ್ತು ಸಂತ್ರಸ್ತರ ಕಣ್ಣುಗಳಲ್ಲಿಯ ಕಂಬನಿಯನ್ನು ತೊಡೆದು ಹಾಕಿ ಆ ಕಣ್ಣುಗಳಲ್ಲಿ ಮತ್ತೆ ಸಂತೋಷ, ಸಂತೃಪ್ತಿಗಳನ್ನು ಮಿಂಚಿಸುವ ಲೋಕೋತ್ತರ ಕಾರ್ಯಕ್ಕೆ ಕಂಕಣಬದ್ಧರಾದ ಅವರ ಬದುಕು ಬದುಕಲ್ಲ! ಅದೊಂದು ಬೆಳಕು ; ಅದೊಂದು ಅಲೌಕಿಕ ಗೀತೆ !! ಅದ್ವಿತೀಯ ಸಂಗೀತ !!!

## ಬಾಳೇ ಹೊನ್ನ ಊರಾಗಲಿ :

ಕೊಲನುಪಾಕಿಯ ಶ್ರೀ ಸೋಮೇಶ್ವರ ಲಿಂಗದಿಂದ ಪ್ರಾದುರ್ಭವಿಸಿದ ಜಗದ್ಗುರುಗಳು ಮಲಯಾಚಲದ ಸುರಮ್ಯ ಸ್ಥಳದಲ್ಲಿ ನೆಲೆನಿಂತು ಆ ಮನೋಹರ ಸ್ಥಳದಲ್ಲಿಯೇ ತಮ್ಮ ಶ್ರೀಪೀಠವನ್ನು ಸಂಸ್ಥಾಪಿಸಿ ಕರ್ನಾಟಕದ ಮಣ್ಣಿನ ಪುಣ್ಯವನ್ನು ಹೆಚ್ಚಿಸಿದರು. ಪ್ರಕೃತಿಯ ವರಕೃಪೆಗೆ ಪಾತ್ರವಾದ ಮಲೆನಾಡಿನ ತೆಂಗು-ಕಂಗುಗಳಿಂದ ಮತ್ತು ಫಲ ಪೂಗ-ಪುಷ್ಪಗಳಿಂದ ಸಮೃದ್ಧವಾದ ನಯನ ಮನೋಹರ ತಾಣದಲ್ಲಿ ಶ್ರೀ ವೀರ ಪೀಠವು ತಲೆಯೆತ್ತಿ ನಿಂತುಕೊಳ್ಳುವಂತೆ ಮಾಡಿದರು. ಶ್ರೀಪೀಠದ ಪೀಠಾಚಾರ್ಯರು ನೆಲೆನಿಂತು ವಿಶ್ವಕಲ್ಯಾಣದ ತಮ್ಮ ಉದ್ದೇಶವನ್ನು ಸಫಲಿಸಿದ ಮತ್ತು ಜನತೆಯ **'ಬಾಳೇ ಹೊನ್ನ ಊರಾಗಲಿ'** ಎಂದು ಹರಸಿದ ಆ ಸ್ಥಳವೇ ಆ ನಂತರ **'ಬಾಳೆಹೊನ್ನೂರು'** ಎಂದು ವಿಖ್ಯಾತವಾಯಿತು. ನಮ್ಮ ಬಾಳನ್ನು ಹೊನ್ನ ಊರನ್ನಾಗಿಸಬೇಕು ಎಂಬ ಆಶಯ ಪರಮಪೂಜ್ಯರದು.

## ಗುರುಸಾರ್ವಭೌಮರು :

ಶ್ರೀಪೀಠದ ಇತಿಹಾಸವನ್ನು ಶ್ರೀಮಂತಿಸಿದ ಶ್ರೇಯಸ್ಸು ಶ್ರೀಪೀಠದ ಪೀಠಾಚಾರ್ಯರಿಗೆ ಸಲ್ಲಬೇಕು. ತಮ್ಮಲ್ಲಿನ ತಪಸ್ಸು, ಜ್ಞಾನ, ವೈರಾಗ್ಯಾದಿ ಸರ್ವತೋಮುಖ ವ್ಯಕ್ತಿತ್ವವನ್ನು ವಿನಿಯೋಗಿಸಿ ಅವರು ಶ್ರೀಪೀಠದ 'ಕೀರ್ತಿ-ಕಿರೀಟ'ದ ಕಾಂತಿಯನ್ನು ಹೆಚ್ಚಿಸಿದರು. ಅನೇಕ ಅತಿರಥ-ಮಹಾರಥರು ಶ್ರೀಪೀಠದ ಪೀಠಾಚಾರ್ಯರ ಮಹಿಮಾತಿಶಯಕ್ಕೆ ಹಣೆ ಮಣಿದು ಅವರ 'ಸಾರ್ವಭೌಮತ್ವ'ವನ್ನು ಒಪ್ಪಿಕೊಂಡರು. ಅನೇಕ ಋಷಿ-ಮಹರ್ಷಿಗಳು ಅವರ 'ಜ್ಞಾನ ಬಾಂಢಾರ'ದಿಂದ ಜ್ಞಾನರತ್ನಗಳನ್ನು ಪಡೆದು ಪುನೀತ ರಾದರು. ದ್ವಾಪರಯುಗದಲ್ಲಿ ಜಗದ್ಗುರು ರೇಣುಕಾಚಾರ್ಯರು ಪುರಾಣಪ್ರಸಿದ್ಧ

ಕುಂಭಸಂಭವ ಅಗಸ್ತ್ಯ ಮಹರ್ಷಿಗೆ ವೀರಶೈವ ಶಿವಾದ್ವೈತ ಸಿದ್ಧಾಂತವನ್ನು ಬೋಧಿಸಿ ಆತನನ್ನು ತಮ್ಮ ಶಿಷ್ಯನನ್ನಾಗಿ ಮಾಡಿಕೊಂಡು ಅನುಗ್ರಹಿಸಿದರು.* ಅಗಸ್ತ್ಯ ಮಹರ್ಷಿಯು ಸ್ವ–ಸಂತೋಷದಿಂದ ಜಗದ್ಗುರು ರೇಣುಕರ ಶಿಷ್ಯತ್ವವನ್ನು ಸ್ವೀಕರಿಸಿದ. ಪರಮಪೂಜ್ಯರು ಅಗಸ್ತ್ಯರಿಗೆ ವೀರಶೈವ ತತ್ತ್ವೋಪದೇಶ ಮಾಡಿದ ಆ ಪುಣ್ಯಸ್ಥಳವೇ ರಂಭಾಪುರೀ ಶ್ರೀಪೀಠದ ಗುರುಕ್ಷೇತ್ರವಾಗಿ ನಿಂತುಕೊಂಡಿತು.

ರಾಮ ಪಕ್ಷಪಾತಿಯಾಗಿ ತನ್ನ ಅಣ್ಣ ಹಾಗೂ ಅಸಂಖ್ಯಾಂತ ತನ್ನ ರಾಕ್ಷಸ ಬಾಂಧವರ ಮಾರಣ–ಹೋಮಕ್ಕೆ ಕಾರಣನಾದ ಮತ್ತು ಪಶ್ಚಾತ್ತಾಪದ ದಳ್ಳುರಿಯಲ್ಲಿ ಬೆಂದು ನೊಂದ ಶ್ರೀ ವಿಭೀಷಣನ ಭಕ್ತಿಯ ಆಗ್ರಹಕ್ಕೆ ಒಲಿದು, ಲಂಕೆಯಲ್ಲಿ ಏಕಕಾಲದಲ್ಲಿ ಮೂರು ಕೋಟಿ ಶಿವಲಿಂಗಗಳನ್ನು ಸ್ಥಾಪನೆ ಮಾಡುವ ಮೂಲಕ ಜಗದ್ಗುರು ರೇಣುಕರು ಪರಮ ಶಿವಭಕ್ತ ಶ್ರೀ ರಾವಣೇಶ್ವರನ ಒಂಬತ್ತು ಕೋಟಿ ಶಿವಲಿಂಗಗಳ ಸಂಸ್ಥಾಪನೆಯ ಸಂಕಲ್ಪವನ್ನು ನೆರವೇರಿಸಿಕೊಟ್ಟರು. ಕಲಿಯುಗದಲ್ಲಿ ರೇವಣಸಿದ್ಧರೆಂಬ ನಾಮದಿಂದ ವಿಖ್ಯಾತರಾದ ಶ್ರೀ ಜಗದ್ಗುರು ರೇಣುಕರು ೧೪ ನೂರು ವರ್ಷಗಳವರೆಗೆ ವೀರಶೈವ ತತ್ತ್ವೋಪದೇಶ ಮಾಡಿದ್ದಷ್ಟೇ ಅಲ್ಲ, ಅದ್ವೈತ ಮತದ ಪ್ರಬಲ ಪ್ರಚಾರಕ್ಕೆ ಮತ್ತು ಪ್ರಸಾರಕ್ಕೆ 'ಅಥಶ್ರೀ' ಹೇಳಿ ಸಶಕ್ತ ಭೂಮಿಕೆಯನ್ನು ಬರೆದ ಶ್ರೀ ಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರ ಲಿಂಗವನ್ನು ಹಾಗೂ ರತ್ನಗರ್ಭ ಗಣಪತಿಯನ್ನು ಅನುಗ್ರಹಿಸಿ ಹರಸಿದರು.

ಈ ಶ್ರೀಪೀಠದ ಪರಂಪರೆಯಲ್ಲಿ ಅನೇಕ ಕಾಲಜ್ಞಾನಿಗಳು ಮತ್ತು ಪವಾಡ ಪುರುಷರು ಆಗಿ ಹೋಗಿದ್ದಾರೆ. ಅವರೆಲ್ಲರೂ 'ಕರ್ತುಂ, ಅಕರ್ತುಂ, ಅನ್ಯಥಾ ಕರ್ತುಮ್' ಶಕ್ತಿಸಂಪನ್ನರಾಗಿದ್ದರು. ಶ್ರೀಪೀಠದ ಆಚಾರ್ಯರು ಯಕ್ಷ–ಕಿನ್ನರರಿಗೆ ಮುಕ್ತಿ ಕೊಟ್ಟರು. ಸೊಕ್ಕೇರಿದ ರಾಜ–ಮಹಾರಾಜರುಗಳ ಸೊಕ್ಕಿಗೆ ಉಕ್ಕಿನ ಕಡಿವಾಣವನ್ನು ಹಾಕಿ ಅವರ ಭ್ರಮನಿರಸನಮಾಡಿ ಅಹಂಕಾರ ಮತ್ತು ದುರಭಿಮಾನಗಳ ಅಂತರಿಕ್ಷದಲ್ಲಿ ಸಂಚರಿಸಿಕೊಂಡಿದ್ದ ಅವರು ಮತ್ತೆ ನೆಲದ ಮೇಲೆ ನಿಂತುಕೊಳ್ಳುವಂತೆ ಮಾಡಿದರು. ಚಂಡ–ಉದ್ದಂಡರನ್ನು ನಯಗೊಳಿಸಿದರು. ಪುಂಡ–ಪೋಕರಿಗಳನ್ನು ಪ್ರಜ್ಞಾವಂತರನ್ನಾಗಿ ಮಾಡಿದರು. ಆಚಾರ–ವಿಚಾರಗಳ 'ಕೂಡಲಸಂಗಮ'ದಂತಿರುವ ಅವರ ವ್ಯಕ್ತಿತ್ವವು ನಾಡು–ನುಡಿ, ಗಡಿ–ಸೀಮೆಗಳ ಎಲ್ಲೆಯನ್ನು ಮೀರಿ ವೀರಶೈವ ಧರ್ಮದ ತಾತ್ತ್ವಿಕ ಕಂಪನ್ನು ಹರಡುವಲ್ಲಿ 'ಅಹಂಭೂಮಿಕೆ'ಯನ್ನು ವಹಿಸಿತು. ಪರಮಪೂಜ್ಯರು ನಡೆದ ನೆಲ ಮತ್ತು ನಿಂತ ನೆಲೆಗಳು ಪುಣ್ಯಕ್ಷೇತ್ರಗಳಾದವು. ಅವರು ಸ್ಪರ್ಶಿಸಿದ ನದಿ–

---

* ಜಗದ್ಗುರು ಶ್ರೀ ರೇಣುಕರು ಅಗಸ್ತ್ಯ ಮಹರ್ಷಿಗಳಿಗೆ ಬೋಧಿಸಿದ ವೀರಶೈವ ಶಿವಾದ್ವೈತ ಸಿದ್ಧಾಂತವನ್ನು ಶ್ರೀ ಷ.ಬ್ರ. ಶಿವಯೋಗಿ ಶಿವಾಚಾರ್ಯರು ವೀರಶೈವರ ಧರ್ಮಗ್ರಂಥವಾದ ಶ್ರೀಸಿದ್ಧಾಂತ ಶಿಖಾಮಣಿಯಲ್ಲಿ ಸೆರೆಹಿಡಿದಿಟ್ಟು ವೀರಶೈವ ಜನಾಂಗಕ್ಕೆ ಮತ್ತು ಸಮಾಜಕ್ಕೆ ಮಹದುಪಕಾರ ಮಾಡಿದ್ದಾರೆ.

ಕೊಳ್ಳಗಳು ಕಲ್ಯಾಣಿ–ತೀರ್ಥಗಳಾದವು. ಪರಮಪೂಜ್ಯ ಜಗದ್ಗುರುಗಳ ಓಜಸ್ಸು ಮತ್ತು ತೇಜಸ್ಸುಗಳ ಎದುರಿನಲ್ಲಿ ಅರಮನೆ ಮತ್ತು ಅಂತಃಪುರಗಳು ತಲೆಬಾಗುತ್ತಿದ್ದವು.

## ಹಸಿರೇ ಉಸಿರು :

ಸಶಕ್ತ ಐತಿಹಾಸಿಕ ಹಿನ್ನೆಲೆಯನ್ನು ಹೊಂದಿದ ರಂಭಾಪುರೀ ಶ್ರೀಪೀಠದ ಜಗದ್ಗುರುಗಳು ಕೈಯಲ್ಲಿ ಅಶ್ವತ್ಥ ವೃಕ್ಷದ ದಂಡವನ್ನು, ಪಚ್ಚವರ್ಣದ ಕಮಂಡಲುವನ್ನು ಮತ್ತು ಹಸಿರು ವರ್ಣದ ಧ್ವಜವನ್ನು ಹಿಡಿದು ಸಂಚರಿಸುತ್ತಾರೆ. ಹಸಿರು ಬಣ್ಣ ಸಮೃದ್ಧಿ ಮತ್ತು ಪ್ರಗತಿಯ ದ್ಯೋತಕವಾಗಿದೆ. 'ಹಸಿರು–ಕ್ರಾಂತಿ'ಗೆ ಕರೆಕೊಡುವ ಮೂಲಕ ಅನ್ನದಾತನಾದ ರೈತನ ಆತ್ಮಬಲವನ್ನು ಹೆಚ್ಚಿಸುತ್ತದೆ ಶ್ರೀಮದ್ರಂಭಾಪುರೀ ವೀರಪೀಠ. ಈ ಪೀಠದ ಪೀಠಾಚಾರ್ಯರು ಪಂಚ ಮಹಾಭೂತಗಳಲ್ಲೊಂದಾದ 'ಪೃಥ್ವಿ ತತ್ತ್ವ'ದ ಅಧಿಪತಿಗಳು. ವೇದಾಗಮೋಪನಿಷತ್ತುಗಳ ಸಾರಸರ್ವಸ್ವವನ್ನು ಬಲ್ಲ ಈ ಪೀಠಾಚಾರ್ಯರದು ಋಗ್ವೇದ ಪರಂಪರೆ. ಪಂಚಾಕ್ಷರ ಮಂತ್ರದಲ್ಲಿಯ 'ನ' ಕಾರ ಇವರ ಬೀಜಮಂತ್ರ. ಕ್ಷೇತ್ರನಾಥನಾದ ವೀರಭದ್ರ ಸ್ವಾಮಿಯು ವೀರಗೋತ್ರಜರ ಗೋತ್ರಪುರುಷ. ಆತ ಮತ್ತು ಆತನ ಗೋತ್ರಜರು ರೇಣುಕ ಶಾಖೆಗೆ ಸೇರಿದವರು. ಈ ಪೀಠದ ಭಕ್ತರು ಪಡ್ವಿಡಿ ಸೂತ್ರಕ್ಕೆ ಒಳಪಡುತ್ತಾರೆ. ದೇಶದಾದ್ಯಂತ ಅನೇಕ ಶಾಖಾಮಠಗಳನ್ನು ಹೊಂದಿದ ಈ ಶ್ರೀಪೀಠವು 'ವೈಭವ'ಕ್ಕೆ ಮತ್ತು 'ದೌಲತ್ತಿ'ಗೆ ಹೆಸರು ಮಾಡಿದೆ. ಈ ಶ್ರೀಪೀಠದಲ್ಲಿ ಒಂದೇ ಒಂದು ಕೊರತೆ ಇದೆ. ಅದಾವುದು ? ಅದೋ, ಕೊರತೆಯ ಕೊರತೆ.

## ಸಿಂಹಾವಲೋಕನ :

ಇದುವರೆಗೆ ರಂಭಾಪುರಿ ಶ್ರೀಪೀಠದ ಭವ್ಯ ಪೀಠ–ಪರಂಪರೆಯ ಘನತೆ–ಗೌರವಗಳನ್ನು ೧೨೦ ಜಗದ್ಗುರುಗಳು ಎತ್ತಿ ಹಿಡಿದು ಇತಿಹಾಸದ ಪುಟಗಳಲ್ಲಿ ಹಸಿರು ಹಸಿರಾಗಿ ಉಳಿದುಕೊಂಡಿದ್ದಾರೆ. ಈ ಪೀಠ ಪರಂಪರೆಯಲ್ಲಿ ಜ. ರೇವಣಾರಾಧ್ಯ, ಜ. ರೇಣುಕ, ಜ. ರೇವಣಸಿದ್ಧ....... ಇತ್ಯಾದಿ ಅಭಿದಾನಗಳಿಂದ ಪ್ರಸಿದ್ಧರಾದ ತಪಸ್ವೀ ಆಚಾರ್ಯರುಗಳು ಜನತೆಯ ಕಲ್ಯಾಣಕ್ಕಾಗಿ ಅಹೋರಾತ್ರಿ ತಮ್ಮ ತಪೋಮಯ ವ್ಯಕ್ತಿತ್ವವನ್ನು ದುಡಿಸಿದ್ದಾರೆ. ಈ ಪೀಠ ಪರಂಪರೆಯ ವಿಶಾಲವಾದ ಬಳ್ಳಿಯಲ್ಲಿ ಜ. ಶ್ರೀ ರೇವಣಾರಾಧ್ಯ, ರೇಣುಕ, ರೇವಣಸಿದ್ಧ ಇವರೇ ಮೊದಲಾದವರಲ್ಲದೆ ಜ. ಶ್ರೀ ರುದ್ರಮುನೀಶ್ವರ, ಶ್ರೀ ಮುಕ್ತಿಮುನೀಶ್ವರ ಮತ್ತು ಶ್ರೀ ದಿಗಂಬರ ಮುಕ್ತೀಶ್ವರ, ಶ್ರೀ ರೇವಣಸಿದ್ಧೇಶ್ವರ............ ಹೀಗೆ ಇನ್ನೂ ನೂರಾರು ಜನ ಜಗದ್ಗುರುಗಳು ಆಗಿ ಹೋಗಿದ್ದಾರೆ. ಇವರೆಲ್ಲ ಉದ್ದಾಮ ಪಂಡಿತರು, ವಿದ್ಯಾನಿಧಿಗಳು, ತಪೋವಾರಿಧಿಗಳು, ಶಿವಯೋಗನಿಷ್ಠರು ಆಗಿದ್ದರು. ಜ. ಶ್ರೀ ರುದ್ರಮುನೀಶ್ವರರಂತೂ 'ಕಾಲಜ್ಞಾನಿ'ಗಳೆಂದೇ

ಪ್ರಸಿದ್ಧರಾಗಿದ್ದಾರೆ.

## ಅರಮನೆಯ ಗೌರವ :

ಈ ಪೀಠದ ೧೧೩ನೆಯ ಪೀಠಾಚಾರ್ಯರಾದ ಜ. ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳವರ ದರ್ಶನಾಶೀರ್ವಾದವನ್ನು ಪಡೆಯಲು ಅಂದಿನ ಮೈಸೂರಿನ ಮಹಾರಾಜರಾದ ಶ್ರೀ ಚಾಮರಾಜ ಒಡೆಯರರವರು ಶ್ರೀಪೀಠಕ್ಕೆ ಆಗಮಿಸಿದುದನ್ನು ಈ ಸಂದರ್ಭದಲ್ಲಿ ಜ್ಞಾಪಿಸಿಕೊಳ್ಳಬಹುದು. ಅದೇ ರೀತಿ ಈ ಶ್ರೀಪೀಠದ ೧೧೮ನೆಯ ಶ್ರೀ ಜಗದ್ಗುರು ಅಭಿನವ ರೇಣುಕ ಶಿವಾನಂದ ರಾಜೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳನ್ನು ಮೈಸೂರಿನ ಮಹಾರಾಜರಾದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರರವರು ತಮ್ಮ ಮೈಸೂರು ಅರಮನೆಗೆ ಬರಮಾಡಿಕೊಂಡು ಸಕಲ ರಾಜ–ಬಿರುದಾವಳಿಗಳಿಂದ ಗೌರವಿಸಿ ಆಶೀರ್ವಾದ ಪಡೆದದ್ದುಂಟು. ೧೧೭ನೆಯ ಪೀಠಾಚಾರ್ಯರಾದ ಜ. ಶ್ರೀ ಪಂಚಾಕ್ಷರ ಶಿವಾಚಾರ್ಯ ಮಹಾಸ್ವಾಮಿಗಳು ಕಾಶಿಯಲ್ಲಿ ದಿ. : ೨೧–೧–೧೯೧೮ ರಂದು ನಡೆದ ಪಂಚ ಪೀಠಾಧೀಶ್ವರರ ಸಮ್ಮೇಳನದಲ್ಲಿ ಭಾಗವಹಿಸಿ ಹಲವು ಮಹತ್ತ್ವದ ನಿರ್ಣಯ (ಠರಾವು)ಗಳನ್ನು ಮಂಡಿಸುವಲ್ಲಿ ಮಹತ್ತರವಾದ ಪಾತ್ರವನ್ನಾಡಿದರು. ಶ್ರೀಪೀಠದ ೧೧೫ನೆಯ ಜಗದ್ಗುರುಗಳಾದ ಶ್ರೀ ಗುರುವೃಷಭ ರಾಜೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳ ಸಾಧನೆಗಳನ್ನು ಕೂಡ ದೃಷ್ಟಿಬಾಹಿರವಾಗಿಸುವಂತಿಲ್ಲ. ಈ ಶ್ರೀಪೀಠದ ಪ್ರತಿಯೊಬ್ಬ ಜಗದ್ಗುರುಗಳೂ ಶ್ರೀಪೀಠದ ಒಂದೊಂದು ಸಶಕ್ತ ಅಧ್ಯಾಯವಾಗಿದ್ದುಕೊಂಡು ಪೀಠದ ಸರ್ವತೋಮುಖ ಪ್ರಗತಿಗಾಗಿ ತಮ್ಮ ತಪಶ್ಶಕ್ತಿ ಹಾಗೂ ಬುದ್ಧಿಶಕ್ತಿಗಳನ್ನು ಬಳಸಿ ಪರಿಶ್ರಮಿಸಿದ್ದಾರೆ. ಭಾರತೀಯ ಇತಿಹಾಸದಲ್ಲಿ ವೀರಶೈವ ಸಮಾಜದ ಪ್ರತಿಷ್ಠೆಯನ್ನು ಹೆಚ್ಚಿಸುವುದರ ಜೊತೆ ಜೊತೆಯಲ್ಲಿ ಭಾರತೀಯ ಸಂಸ್ಕೃತಿಯ ಮಣ್ಣಿನಲ್ಲಿ ವೀರಶೈವ ಧರ್ಮದ ಬೇರುಗಳನ್ನು ಭದ್ರಪಡಿಸಿದರು. ವೀರಶೈವ ಧರ್ಮದ ಬಾಹುಗಳನ್ನು ಬಲಿಷ್ಠಗೊಳಿಸಿದರು.

## ಸಾಕ್ಷಾತ್ ಶಿವ :

ಶ್ರೀಶ್ರೀಶ್ರೀ ೧೦೦೮ ಜಗದ್ಗುರು ಪ್ರಸನ್ನ ರೇಣುಕ ವೀರ ಗಂಗಾಧರ ಶಿವಾಚಾರ್ಯ ಮಹಾಸ್ವಾಮಿಗಳವರು ರಂಭಾಪುರಿ ಶ್ರೀಪೀಠದ ೧೧೯ನೆಯ ಪೀಠಾಧ್ಯಕ್ಷರು. ಧರ್ಮವು ಅಧರ್ಮದ ಗಾಳಿಗೆ ಸಿಕ್ಕು ತತ್ತರಿಸುತ್ತಿರುವಾಗ, ಮಾನವ ಮಾನವನನ್ನೇ ತರಿದು ತಿನ್ನುತ್ತಲಿರುವಾಗ, ಮಾನವನಲ್ಲಿ ಮಾನವೀಯತೆಯೇ ಇಲ್ಲವಾಗಿ ಆತನೊಂದು ಹಿಂಸ್ರಪಶುವಿನಂತೆ ವರ್ತಿಸುತ್ತಿರುವಾಗ ಮಾನವನಿಗೆ ಮಾನವ ಧರ್ಮದ ಬೋಧೆ ಮಾಡಿ **'ಮಾನವ ಧರ್ಮಕ್ಕೆ ಜಯವಾಗಲಿ ; ಧರ್ಮದಿಂದಲೇ ವಿಶ್ವಕ್ಕೆ ಶಾಂತಿ'** ಎಂದು ಪುಂಖಾನುಪುಂಖವಾಗಿ ಸಾರಿ ಹೇಳಿದ ದಿವ್ಯಾತ್ಮರವರು. ಮಾನವ ಧರ್ಮವನ್ನು

ಉಳಿಸುವುದಕ್ಕಾಗಿ ಮತ್ತು ಬೆಳೆಸುವದಕ್ಕಾಗಿ ಅಹರ್ನಿಶಿ ಪರಿಶ್ರಮಿಸಿದ ತುಂಬು ಜೀವನ ಅವರದು. ಪರಮಪೂಜ್ಯರಿಗೆ ಶಿವಪೂಜೆಯೇ ಸರ್ವಸ್ವವಾಗಿತ್ತು. ಅವರ ಶಿವಪೂಜಾ ವೈಭವವನ್ನು ನೋಡುವುದೇ ಕಣ್ಣಿಗೆ ಹಬ್ಬವಾಗಿತ್ತು. ಅಧಿಕೃತ ವಾಣಿ ಹಾಗೂ ಅಚ್ಚುಕಟ್ಟಾದ ಆಚಾರ–ವಿಚಾರಗಳನ್ನು ಹೊಂದಿದ ಅವರು ಭೂಲೋಕವನ್ನೇ ಒಂದು 'ಮುಕ್ತಿ ಮಂದಿರ'ವನ್ನಾಗಿಸಬೇಕೆಂಬ ಉದಾತ್ತ ಸಂಕಲ್ಪವನ್ನು ಹೊಂದಿದ್ದರು. ಅವರ ವಾಣಿ ಅಸಾಮಾನ್ಯವಾಗಿತ್ತು ಮತ್ತು ಅಸ್ಖಲಿತವಾಗಿತ್ತು. ಅವರು ನುಡಿದರೆ ಧರ್ಮ–ದುಂದುಭಿಗಳು ಮೊಳಗಿಕೊಳ್ಳುತ್ತಿರುವಂತೆ ಭಾಸವಾಗುತ್ತಿತ್ತು. ಅವರ ನುಡಿ ಬರೀ ನುಡಿಯಲ್ಲ; ಅದು ನುಡಿ–ಗುಡುಗು. ತಪೋನುಷ್ಠಾನಗಳೇ ಅವರ ಉಸಿರಾಗಿದ್ದವು. ಸಹಸ್ರ ಕುಂಭಗಳಿಂದ ಇಷ್ಟಲಿಂಗಕ್ಕೆ ಅಭಿಷೇಕ ಮಾಡಿ ಆನಂದಪಡುತ್ತಲಿದ್ದ ಅವರು ತಮ್ಮ ತಪಶ್ಶಕ್ತಿಯಿಂದ ಮತ್ತು ಅನುಷ್ಠಾನ ಬಲದಿಂದ ಪಂಚ ಮಹಾಭೂತಗಳ ಮೇಲೆಯೇ ಅಧಿಕಾರ ನಡೆಯಿಸಿದವರು. ಆಕಾಶಕ್ಕೆ ಅಂಕುಶವನ್ನಿಟ್ಟವರು ಅವರು. ಮೋಡಗಳನ್ನು ಮಾತನಾಡಿಸಿ ಅವುಗಳ ಮೇಲೆ ಆಡಳಿತ ಮಾಡಿದವರು ಅವರು. ಮಿಂಚು–ಗುಡುಗುಗಳನ್ನೇ ದಿಗ್ಭ್ರಮೆಗೆ ಒಳಗು ಮಾಡಿದ ಕೀರ್ತಿ ಅವರದು. ವೈರಾಗ್ಯದ ಸಾಕಾರ ಮೂರ್ತಿಯಂತಿದ್ದ ಅವರಿಗೆ ಪೀತಾಂಬರ ಮತ್ತು ಗೋಣಿ ಚೀಲಗಳೆರಡರಲ್ಲಿ ಯಾವ ಅಂತರವೂ ಕಂಡು ಬರುತ್ತಿರಲಿಲ್ಲ. ಚಿನ್ನದ ಕಿರೀಟ ಮತ್ತು ರುದ್ರಾಕ್ಷಿಯ ಕಿರೀಟಗಳನ್ನು ಧಾರಣಮಾಡುತ್ತಲಿದ್ದ ಅವರ ತೇಜಸ್ಸನ್ನು ಸಹಿಸಿಕೊಳ್ಳುವುದು ಸಾಮಾನ್ಯರಿಗೆ ಆಗುತ್ತಲೇ ಇರಲಿಲ್ಲ. ಅವರ ಪ್ರಭಾ–ವಲಯ ಮತ್ತು ಪ್ರಭಾವ ವಲಯಗಳಲ್ಲಿ ಉಳಿದವರೆಲ್ಲರೂ ಚುಕ್ಕೆ–ತಾರೆಗಳಂತೆ ಮಿನುಗಬೇಕೇ ಹೊರತು ಮಿಂಚಿನಂತೆ ಮಿಂಚಿ ಮರೆಯಾಗಬೇಕೇ ಹೊರತು 'ಸ್ಥಾಯಿ'ಯಾಗಿ ಮತ್ತು ಶಾಶ್ವತವಾಗಿ ನಿಂತುಕೊಳ್ಳಲಿಕ್ಕೆ ಆಗುತ್ತಿರಲಿಲ್ಲ. ಅವರ ಪ್ರವಾಹವೇ ಅಂಥದ್ದು ! ಅವರ ಪ್ರಭಾವವೇ ಅಂಥದ್ದು !! ಕರ್ನಾಟಕ ಹಾಗೂ ಮಹಾರಾಷ್ಟ್ರದ ಜನತೆ ಅವರನ್ನು **'ಸಾಕ್ಷಾತ್ ಶಿವ'** ನೆಂದೇ ಭಾವಿಸಿ ಆರಾಧಿಸುತ್ತಿದ್ದರು. ರಂಭಾಪುರಿ ಶ್ರೀಪೀಠವನ್ನು ಮನೆ–ಮನೆಗೆ ಪರಿಚಯಿಸಿದ ಕೀರ್ತಿ ಅವರದು.

## ಆತ್ಮೀಯತೆಯ ಅಯಸ್ಕಾಂತದಂತೆ :

ರಂಭಾಪುರಿ ಶ್ರೀಪೀಠದ ೧೨೦ನೆಯ ಪೀಠಾಧ್ಯಕ್ಷರಾಗಿದ್ದ ಶ್ರೀ ೧೦೦೮ ಜಗದ್ಗುರು ಪ್ರಸನ್ನ ರೇಣುಕ ವೀರ ರುದ್ರಮುನಿ ಶಿವಾಚಾರ್ಯ ಮಹಾಸ್ವಾಮಿಗಳವರ ನೆನಪು ಜನ–ಮನದಲ್ಲಿ ಇನ್ನೂ ಹಸಿರು ಹಸಿರಾಗಿದೆ. ಅವರು ನಮ್ಮನ್ನೆಲ್ಲ ಅಗಲಿ ವರುಷ–ವರುಷಗಳೆರಡು ಗತಿಸಿ ಹೋದರೂ ಅವರು ನಮ್ಮೆಲ್ಲರನ್ನು ಆಶೀರ್ವದಿಸುತ್ತ ನಮ್ಮ ಮಧ್ಯದಲ್ಲಿಯೇ ಇದ್ದುಕೊಂಡಂತಿದೆ. ಪರಮಪೂಜ್ಯರು ವಿದ್ವಾಂಸರು, ಗುಣಗ್ರಾಹಿಗಳು ಮತ್ತು ಧರ್ಮ–ಸೂಕ್ಷ್ಮಗಳನ್ನು ತಿಳಿದವರಾಗಿದ್ದರು. ಮರಾಠಿ,

ಕನ್ನಡ, ಹಿಂದೀ ಮತ್ತು ಸಂಸ್ಕೃತ ಭಾಷೆಗಳಲ್ಲಿ ಪ್ರಭುತ್ವ ಹೊಂದಿದ್ದ ಅವರು ಚತುರ್ಭಾಷಾ ವಿಶಾರದರಾಗಿದ್ದರು. ಶಾಂತ ಸ್ವಭಾವದ ಪ್ರಸನ್ನ ಮುಖಮುದ್ರೆಯ ಅವರು ಪ್ರಸನ್ನತೆಯ 'ಪರ್ಯಾಯ ಪದ'ದಂತಿದ್ದರು. ಯಾವತ್ತೂ ಅವರ ಮುಖದಲ್ಲಿ ಹೂ–ನಗೆ ಅರಳಿಕೊಂಡಿರುತ್ತಿತ್ತು. ಎಲ್ಲರನ್ನೂ ಆತ್ಮೀಯತೆಯಿಂದ ಮಾತನಾಡಿಸುತ್ತಲಿದ್ದ ಅವರೊಂದು ಆತ್ಮೀಯತೆಯ ಅಯಸ್ಕಾಂತದಂತಿದ್ದರು. ಅವರ ಆತ್ಮೀಯತೆಯ ಆಕರ್ಷಣೆಗೆ ಒಳಗಾಗದವರೇ ಇಲ್ಲ. ಅವರ ವಿದ್ವತ್ ಪ್ರೇಮವು ಅವರ ವ್ಯಕ್ತಿತ್ವದ ಶ್ರೀಮಂತಿಕೆಯನ್ನು ಹೆಚ್ಚಿಸಿತ್ತು. ವೀರಶೈವ ಧರ್ಮದ ಮತ್ತು ವೀರಶೈವ ಜನತೆಯ ಕಲ್ಯಾಣಕ್ಕಾಗಿ ಅವರು ನಿರಂತರವಾಗಿ ತಮ್ಮೆಲ್ಲ ಶಕ್ತಿ–ಸಾಮರ್ಥ್ಯಗಳನ್ನು 'ಬಂಡವಾಳ'ವನ್ನಾಗಿಸಿ ಶ್ರಮಿಸಿದರು. ಅವರ ಕಾಲಾವಧಿಯಲ್ಲಿ ಪೀಠದ ಅಂತರಂಗ ಮತ್ತು ಬಹಿರಂಗಗಳು ಹತ್ತು ಹಲವು ರಚನಾತ್ಮಕ ಕ್ರಿಯಾ–ಕಲಾಪಗಳಿಂದ ತುಂಬಿಕೊಂಡವು. ಪರಮಪೂಜ್ಯರು ಶ್ರೀಪೀಠದ ಕ್ರಿಯಾಶೀಲತೆಯನ್ನು ಹೆಚ್ಚಿಸಿದರು. ತಮ್ಮ ಸುದಕ್ಷ ವ್ಯಕ್ತಿತ್ವದಿಂದ ತಮ್ಮ ಶ್ರೀಪೀಠದ ಪೂರ್ವಾಚಾರ್ಯರ ಕನಸು ಮತ್ತು ಸಂಕಲ್ಪಗಳನ್ನು ನನಸುಗೊಳಿಸಿದ ಪರಮಪೂಜ್ಯರು ದಿನಾಂಕ : ೧೭–೮–೧೯೯೧ ರಂದು ಶಿವಾಧೀನರಾದರು. ವೀರಶೈವ ಜನತೆಯ ಮನದಲ್ಲಿ ಎಂದೆಂದೂ ಬಾಡದ ಅನುಭವಗಳನ್ನು ಇಟ್ಟು ಹೋದ ಮತ್ತು ಬಿಟ್ಟು ಹೋದ ಅವರು ಭಕ್ತರ ಹೃದಯ–ದೇಗುಲದಲ್ಲಿ ಯಾವತ್ತೂ ತುಂಬಿಕೊಂಡಿದ್ದಾರೆ.

## ವರ್ತಮಾನದ ಸನ್ಮಾನ :

ಶ್ರೀಮದ್ರಂಭಾಪುರೀ ಪೀಠದ ವರ್ತಮಾನ ಪೀಠಾಧೀಶ್ವರರಾದ ಶ್ರೀ ೧೦೦೮ ಜಗದ್ಗುರು ಪ್ರಸನ್ನರೇಣುಕ ವೀರ ಸೋಮೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳವರು ವೀರಸಿಂಹಾಸನದ ೧೨೧ನೆಯ ಪೀಠಾಧೀಶ್ವರರು. ಲಿಂಗೈಕ್ಯ ಜಗದ್ಗುರುಗಳವರ ಪರಮ ಪವಿತ್ರ ಕೃಪಾಛತ್ರದಲ್ಲಿ ಮತ್ತು ಅನುಗ್ರಹದ ಶ್ರೀರಕ್ಷೆಯಲ್ಲಿ ರೂಪುಗೊಂಡ ಸದ್ಯದ ಪೀಠಾಧೀಶ್ವರರು ತಮ್ಮ ಪೂರ್ವಾಚಾರ್ಯರುಗಳೆಲ್ಲರ ಶೇಷ–ಕನಸುಗಳನ್ನೆಲ್ಲ ನನಸುಗೊಳಿಸುವ ಸಾಮರ್ಥ್ಯವನ್ನು ಹೊಂದಿರುವುದು ವೀರಶೈವರ ಮತ್ತು ವೀರಪೀಠದ 'ಅಹೋಭಾಗ್ಯ'ವೆಂದೇ ಹೇಳಬಹುದು. ಪರಮಪೂಜ್ಯರದು ಸಶಕ್ತ ವ್ಯಕ್ತಿತ್ವ. ಅವರದು ಮೂಕ ವ್ಯಕ್ತಿತ್ವವಲ್ಲ! ಅವರದು ಮಾತನಾಡುವ ವ್ಯಕ್ತಿತ್ವ. ಪರಮಪೂಜ್ಯ ಸನ್ನಿಧಿಯವರು ರಂಭಾಪುರೀ ಶ್ರೀಪೀಠದ ಘನತೆ–ಗೌರವಗಳಿಗೆ ಹೊಸ ಆಯಾಮವನ್ನು ಒದಗಿಸಿ ಕೊಡುತ್ತಲಿದ್ದಾರೆ. ಯೌವನಕ್ಕೆ ಹೊಸ ಭಾಷ್ಯವನ್ನು ಬರೆಯುತ್ತಿರುವ ಕೀರ್ತಿ ಅವರದು. ಸೊಕ್ಕಿನ ಯೌವನವನ್ನು ಅಷ್ಟು.... ಇಷ್ಟು.... ಇನ್ನಷ್ಟು.... ಮತ್ತಷ್ಟು... ಸೊಕ್ಕಿಸುವುದೇ ಯೌವನದ ಸಾರ್ಥಕತೆಯೆಂದು ಬಹಳಷ್ಟು ಜನ ತಿಳಿದುಕೊಂಡಿರುತ್ತಾರೆ. ಆದರೆ ಸನ್ನಿಧಿಗಳು ಇದಕ್ಕೆ ಅಪವಾದ. ಇನ್ನೂ ೪೦ರ ಗಡಿಯನ್ನು ಮುಟ್ಟದ ಅವರು

ತಮ್ಮ ಯೌವನವನ್ನು ಧರ್ಮಕ್ಷೇತ್ರದ ಕ್ಷಿತಿಜವನ್ನು ವಿಸ್ತರಿಸುವುದಕ್ಕಾಗಿ ಬಳಸಿಕೊಳ್ಳುತ್ತಲಿದ್ದಾರೆ. ಪರಮಪೂಜ್ಯರು ಎಳೆಯ ವಯಸ್ಸಿನಲ್ಲಿಯೇ ಅನುಭವದ ಬಲು ಗಟ್ಟಿಯಾದ ತಳಹದಿಯ ಮೇಲೆ ತಮ್ಮ ವ್ಯಕ್ತಿತ್ವದ ಕಟ್ಟಡವನ್ನು ಕಟ್ಟಿಕೊಂಡಿದ್ದಾರೆ. ಅವರು ಕ್ರಿಯಾಶೀಲತೆಯ ರಸಗಟ್ಟಿ ಇದ್ದಂತಿದ್ದಾರೆ. ಅವರ ವ್ಯಕ್ತಿತ್ವ ನಿಂತ ನೀರಂತಲ್ಲ; ಅದು ಧುಮುಕಿ ಧುಮುಕಿ ಧುಮ್ಮಿಕ್ಕಿ ಮುಂದೆ ಮುಂದೆ ಹರಿಯುವ ಜಲಪ್ರವಾಹದಂತೆ. **ಪರಮಪೂಜ್ಯರ ಕುರಿತು ಮಾತನಾಡತೊಡಗಿದರೆ ಒಣಗಿ ಹೋದ ನಾಲಿಗೆಯು ಕೂಡ ಮತ್ತೆ ಒದ್ದೆಯಾಗಿ ನಿಂತುಕೊಳ್ಳುತ್ತದೆ.** ಸನ್ನಿಧಿಯವರ ಪರಮ ಪವಿತ್ರ ಬದುಕೇ ಒಂದು ಜೈತ್ರಯಾತ್ರೆ. ಪರಮಪೂಜ್ಯರ ಕ್ರಿಯಾಶೀಲ ದಕ್ಷ ವ್ಯಕ್ತಿತ್ವವನ್ನು ಕಂಡು ಪೂರ್ವಾಚಾರ್ಯರುಗಳ ಆತ್ಮಗಳು ಸಂತೃಪ್ತಗೊಂಡು ಒಳಗೊಳಗೇ ಖುಷಿಪಡುತ್ತಲಿವೆ ಎಂಬ ನಮ್ಮೀ ಮಾತು ಅತಿಶಯೋಕ್ತಿಯೇನಲ್ಲ ಎಂಬುದು ತಪ್ಪಲ್ಲ.

## ಮೊದಲ ಅಧ್ಯಾಯದ ಮೊದಲ ಪುಟಗಳು :

ಪರಮಪೂಜ್ಯ ಸನ್ನಿಧಿಯವರ ಜೀವನವೆಂಬ ಉದ್ಗ್ರಂಥದ ಮೊದಲ ಅಧ್ಯಾಯಗಳತ್ತ ದೃಷ್ಟಿ ಹರಿಸಿದಾಗ ಅವರ ಜೀವನವೇ ಒಂದು '**ಸಾಧನೆಯ ಶಿಬಿರ**'ವಿದ್ದಂತಿದೆ ಎಂಬೀ ನಮ್ಮಗಳ 'ಅಭಿಪ್ರಾಯ'ವನ್ನು 'ಗಮನ ಕೇಂದ್ರ'ದಿಂದ ದೂರಾಗಿಸುವಂತಿಲ್ಲ

## ಮೊದಲ ಅಧ್ಯಾಯದ ಕೆಲಪುಟಗಳು

ಪರಮಪೂಜ್ಯರು ದಿನಾಂಕ : ೭-೧-೧೯೫೬ರಲ್ಲಿ ಕರ್ನಾಟಕ ರಾಜ್ಯದ ಮತ್ತು ಧಾರವಾಡ ಜಿಲ್ಲೆಯ ಪ್ರತಿಷ್ಠಿತ ನಗರವಾದ ಹುಬ್ಬಳ್ಳಿಯ ಸಮೀಪದಲ್ಲಿರುವ ಹಳಿಯಾಳ ಗ್ರಾಮದಲ್ಲಿ ಜನಿಸಿದರು. ವೇ. ಮೂ. ಚೆನ್ನಬಸವಾರ್ಯರು ಮತ್ತು ಸೌ. ಚೆನ್ನಬಸವಾಂಬೆಯರು ಪೂಜ್ಯರ ತಂದೆ-ತಾಯಿಗಳು. ಬಾಲ್ಯದಲ್ಲಿಯೇ ತಮ್ಮ ಸದುವಿನಯ ಹಾಗೂ ಸದಾಚಾರಗಳಿಂದ ಗ್ರಾಮದ ಜನತೆಯ ಪ್ರೀತ್ಯಭಿಮಾನಕ್ಕೆ ಪಾತ್ರರಾದ ಶ್ರೀಗಳು ತಮ್ಮ ಪ್ರಾಥಮಿಕ ವಿದ್ಯಾಭ್ಯಾಸವನ್ನು ಹಳಿಯಾಳದಲ್ಲಿಯೂ ಹಾಗೂ ಮಾಧ್ಯಮಿಕ ಶಾಲಾ ಶಿಕ್ಷಣವನ್ನು ಗದಗ ನಗರದಲ್ಲಿಯೂ ಪಡೆದರು. ನಂತರ ಗ್ರಾಮದ ಭಕ್ತರ ಆಗ್ರಹದ ಮೇರೆಗೆ ಪಂಚಾಚಾರ್ಯಪ್ರೇಮಿಗಳಾದ ಹಾಗೂ ಗುರುಪೀಠಗಳಲ್ಲಿ ಗೌರವಾದರ ಮನೋಭಾವನ್ನು ಹೊಂದಿದ್ದ ಲಿಂಗೈಕ್ಯ ಹಾನಗಲ್ಲ ಶ್ರೀ ಕುಮಾರ ಶಿವಯೋಗಿಗಳಿಂದ ಸಂಸ್ಥಾಪಿಸಲ್ಪಟ್ಟ 'ಶಿವಯೋಗ ಮಂದಿರ'ಕ್ಕೆ ತೆರಳಿದರು. ಸುಮಾರು ಹದಿನಾಲ್ಕು ತಿಂಗಳುಗಳವರೆಗೆ ಅಲ್ಲಿದ್ದು ಅಧ್ಯಯನ ಮಾಡಿದ ಶ್ರೀಗಳು ಮತ್ತೆ ಮರಳಿ ಹಳಿಯಾಳಕ್ಕೆ ಬಂದರು.

## ಹಳಿಯಾಳ ಹಿರೇಮಠದ ಹೊಸ ಶ್ರೀಗಳು :

ಶ್ರೀಗಳು ಗ್ರಾಮಕ್ಕೆ ಮರಳಿ ಬರುತ್ತಲೇ ಊರಿನ ಪ್ರಮುಖರೆಲ್ಲ ಸೇರಿ ಶ್ರೀಗಳಿಗೆ ಹಿರೇಮಠದ ಗುರುಸ್ಥಾನವನ್ನು ತುಂಬಲು ಕೇಳಿಕೊಂಡರು. ಶ್ರೀಗಳ ಆದೇಶದಂತೆ ಗ್ರಾಮದ ಜನತೆಯು ಪಂಚಪೀಠಾಧೀಶ್ವರರನ್ನು ಹಳಿಯಾಳಕ್ಕೆ ಅತ್ಯಂತ ವೈಭವದಿಂದ ಬರಮಾಡಿಕೊಂಡು ವಿಜೃಂಭಣೆಯಿಂದ ಉತ್ಸವವನ್ನು ನೆರವೇರಿಸಿ ಪಂಚಪೀಠಾಧೀಶ್ವರರ ಪರಮಪೂಜ್ಯ ದಿವ್ಯಸಾನ್ನಿಧ್ಯದಲ್ಲಿ ಶ್ರೀಗಳವರ ಪಟ್ಟಾಭಿಷೇಕವನ್ನು ದಿ. : ೧೧–೪–೭೬ ರಂದು ನೆರವೇರಿಸಿದರು. ಅಂದಿನಿಂದ ಶ್ರೀಗಳು ಶ್ರೀ ಷ. ಬ್ರ. ಸಿದ್ಧಲಿಂಗ ಶಿವಾಚಾರ್ಯರೆಂಬ ಅಭಿದಾನದಿಂದ ಶ್ರೀಮಠದ ಪಟ್ಟಾಧ್ಯಕ್ಷರಾಗಿ ಅಧಿಕಾರವನ್ನು ವಹಿಸಿಕೊಂಡರು.

## ಜ್ಞಾನಮಂದಿರದಲ್ಲಿ ಪದಾರ್ಪಣ :

ಪಟ್ಟಾಧ್ಯಕ್ಷರಾಗುತ್ತಲೇ ಶ್ರೀಗಳು ತಮ್ಮ ವಿದ್ಯಾಧ್ಯಯನಕ್ಕೆ ಪೂರ್ಣವಿರಾಮವನ್ನು ಕೊಡದೆ ಮತ್ತೆ ಅದನ್ನು ಇಮ್ಮಡಿ–ಮುಮ್ಮಡಿ ಉತ್ಸಾಹದಿಂದ ಮುಂದುವರಿಸಿದರು. ರಂಭಾಪುರಿಯ ಲಿಂ. ಜ. ವೀರ ಗಂಗಾಧರ ಶಿವಾಚಾರ್ಯ ಮಹಾಸ್ವಾಮಿಗಳು ಮತ್ತು ಲಿಂ. ಜ. ವೀರರುದ್ರಮುನಿ ಶಿವಾಚಾರ್ಯ ಮಹಾಸ್ವಾಮಿಗಳು ಶ್ರೀಗಳಲ್ಲಿನ ಉತ್ಸಾಹವನ್ನು ಪ್ರೋತ್ಸಾಹಿಸಿದರು ಮತ್ತು ಅವರ ಇಚ್ಛೆಯನ್ನು ಬೆಂಬಲಿಸಿದರು. ಉನ್ನತ ವ್ಯಾಸಂಗಕ್ಕಾಗಿ ಬೆಂಗಳೂರು ಮಹಾನಗರಕ್ಕೆ ಬಂದ ಶ್ರೀಗಳು ಅಲ್ಲಿನ ಶ್ರೀಮದ್ರಂಭಾಪುರಿಯ ಮಹಂತರ ಮಠದಲ್ಲಿದ್ದುಕೊಂಡು ತಮ್ಮ ವಿದ್ಯಾಭ್ಯಾಸವನ್ನು ಮುಂದುವರಿಸಿದರು. ೧೯೭೬ರಲ್ಲಿ ಬೆಂಗಳೂರಿಗೆ ಬಂದ ಶ್ರೀಗಳು ಅಲ್ಲಿನ ಶ್ರೀ ಚಾಮರಾಜೇಂದ್ರ ಸಂಸ್ಕೃತ ಮಹಾವಿದ್ಯಾಲಯದಲ್ಲಿ ಸಂಸ್ಕೃತ ವಿದ್ಯಾಭ್ಯಾಸವನ್ನು ಮಾಡುವುದರ ಜೊತೆ ಜೊತೆಯಲ್ಲಿ ಶ್ರೀ ಜಗದ್ಗುರು ರೇಣುಕಾಚಾರ್ಯ ಮಹಾ ವಿದ್ಯಾಲಯದ ವಿದ್ಯಾರ್ಥಿಗಳಾಗಿದ್ದುಕೊಂಡು ಸ್ನಾತಕ ಅಧ್ಯಯನವನ್ನು ಮಾಡಿದರು. ಕಾವ್ಯ, ಸಾಹಿತ್ಯ, ಮತ್ತು ವಿದ್ವತ್ ಇತ್ಯಾದಿ ಸಂಸ್ಕೃತ ಪರೀಕ್ಷೆಗಳನ್ನು ಅತ್ಯುತ್ತಮ ದರ್ಜೆಯಲ್ಲಿ ತೇರ್ಗಡೆ ಮಾಡಿದ ಶ್ರೀಗಳು ವೀರಶೈವ ಸಿದ್ಧಾಂತವನ್ನು ಮತ್ತು ಶಕ್ತಿ ವಿಶಿಷ್ಟಾದ್ವೈತ ವೇದಾಂತವನ್ನು ಚೆನ್ನಾಗಿ ಅಭ್ಯಾಸ ಮಾಡಿ ಅವುಗಳನ್ನು ಅಂಗವಿಸಿಕೊಂಡರು. ಅವರ ಓದು ಅವರನ್ನು ವೈಚಾರಿಕವಾಗಿ ಮತ್ತು ಬೌದ್ಧಿಕವಾಗಿ ಪ್ರಬುದ್ಧರನ್ನಾಗಿಸಿತು. ಬೆಂಗಳೂರಿನ ಥಳಕು–ಬಳಕು, ಬೆಡಗು–ಬಿನ್ನಾಣ, ವೈಯಾರಗಳಿಗೆಲ್ಲ ಒಲಿಯದೆ ಅವುಗಳಿಂದ ಬಹುದೂರದಲ್ಲಿದ್ದುಕೊಂಡೇ ತಮ್ಮ ಭಾವೀ ಜೀವನದ ಕ್ರಿಯಾಶೀಲ ಬದುಕಿಗೆ ಸಶಕ್ತ ಮುನ್ನುಡಿಯನ್ನು ಬರೆಯತೊಡಗಿದರು.

## ಮೇಲಣಗವಿಮಠಕ್ಕೆ :

ಸರಸ್ವತಿಯ ಜ್ಞಾನಮಂದಿರದಲ್ಲಿದ್ದು ಜ್ಞಾನಾರ್ಜನೆ ಮಾಡಿಕೊಂಡಿರುವಾಗಲೇ ರಂಭಾಪುರಿಯ ಮಹಾಪೀಠದ ಶಾಖಾಮಠಗಳಲ್ಲೊಂದಾದ ಮತ್ತು ಬೆಂಗಳೂರು ಜಿಲ್ಲೆಯ ನೆಲಮಂಗಲ ತಾಲ್ಲೂಕಿನ ಇತಿಹಾಸಪ್ರಸಿದ್ಧ ಶಿವಗಂಗೆಯ ಮೇಲಣಗವಿ ಮಠದ ಕರ್ತೃಪೀಠವು ಶ್ರೀಗಳನ್ನು ಕೈಮಾಡಿ ಕರೆಯತೊಡಗಿತು. ಆ ಶ್ರೀಮಠಕ್ಕೆ ಓರ್ವ ಯೋಗ್ಯ ಅಧಿಕಾರಿಗಳ ಅವಶ್ಯಕತೆ ಇತ್ತು. ಶಿವಗಂಗೆಯು ನಾಟ್ಯ ಸರಸ್ವತಿ ಶಾಂತಳೆಯ ಕುಣಿದು ಕುಪ್ಪಳಿಸಿದ ಇತಿಹಾಸಪ್ರಸಿದ್ಧ ಸ್ಥಳ. ಜ. ಶ್ರೀ ರೇವಣಸಿದ್ಧೇಶ್ವರ, ಶ್ರೀ ಜ. ಮರುಳಸಿದ್ಧ ಮತ್ತು ಶ್ರೀ ಜ. ರುದ್ರಮುನಿ ಶಿವಾಚಾರ್ಯರ ಪವಿತ್ರ ಪಾದಧೂಳಿಯಿಂದ ಪುನೀತವಾದ ಪುಣ್ಯ–ತಾಣವದು. ಅಲ್ಲಿನ ಮೇಲಣಗವಿ ಮಠವು ಇತಿಹಾಸ ಪ್ರಸಿದ್ಧವಾಗಿದ್ದರೂ ಸುದಕ್ಷ ಕರ್ತೃತ್ವ ಶಕ್ತಿಯ ಅಭಾವದಿಂದಾಗಿ ಅದರ ಕೀರ್ತಿಗೆ ಕಾರ್ಮೋಡ ಕವಿದಿತ್ತು. ಆ ಭಾಗದ ಜನರು ಮತ್ತೆ ಮತ್ತೆ ಬಂದು ಲಿಂ. ಜ. ವೀರರುದ್ರಮುನಿ ಶಿವಾಚಾರ್ಯ ಮಹಾಸ್ವಾಮಿಗಳವರನ್ನು ಆಗ್ರಹಪಡಿಸತೊಡಗಿದಾಗ ಜಗದ್ಗುರುಗಳು ಅವರಿಗೆ ಹಳಿಯಾಳದ ಶ್ರೀ ಷ. ಬ್ರ. ಸಿದ್ಧಲಿಂಗ ಶಿವಾಚಾರ್ಯರ ಹೆಸರನ್ನು ಸೂಚಿಸಿದರು. ಜನತೆಯ ಆಗ್ರಹ ಮತ್ತು ಜಗದ್ಗುರುಗಳ ಆದೇಶಕ್ಕೆ ಮಣಿದು ಶ್ರೀಗಳು ತಮ್ಮ ಸಮ್ಮತಿಯನ್ನಿತ್ತಾಗ ಜನತೆಯ ಸಂತಸ–ಸಂಭ್ರಮಕ್ಕೆ ಕೊನೆ ಮೊದಲಿರಲಿಲ್ಲ. ದಿನಾಂಕ : ೩೧–೧–೧೯೮೫ರಂದು ಶಿವಗಂಗೆಯ ಮೇಲಣಗವಿ ಮಠದಲ್ಲಿ ಜಗದ್ಗುರು ಶ್ರೀ ಪ್ರಸನ್ನ ರೇಣುಕ ವೀರ ರುದ್ರಮುನಿ ಶಿವಾಚಾರ್ಯ ಭಗವತ್ಪಾದರ ದಿವ್ಯ ಸಾನ್ನಿಧ್ಯದಲ್ಲಿ ಶ್ರೀ ಷ. ಬ್ರ. ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳ ಎರಡನೆಯ ಪಟ್ಟಾಧಿಕಾರದ ಮಂಗಲ–ಸಮಾರಂಭವು ಅತ್ಯಂತ ವೈಭವದಿಂದ ಜರುಗಿತು.

## ಶಿವಗಂಗೆಯ ಭಗೀರಥ :

ಮೇಲಣಗವಿ ಮಠದ ಅಧಿಕಾರವನ್ನು ವಹಿಸಿಕೊಳ್ಳುತ್ತಲೇ ಶ್ರೀಗಳು ಆ ಮಠದ ಹಾಗೂ ಆ ಕ್ಷೇತ್ರದ ಪುನರುದ್ಧಾರ ಕಾರ್ಯದಲ್ಲಿ ತಮ್ಮನ್ನು ತಾವು ಇಡಿಯಾಗಿ ತೊಡಗಿಸಿಕೊಂಡರು. ಇಷ್ಟಪಟ್ಟದ್ದನ್ನು ಕಷ್ಟಪಟ್ಟು ತಮ್ಮದನ್ನಾಗಿಸಿಕೊಳ್ಳಲೇಬೇಕು ಎಂಬ ಸಾತ್ವಿಕ ಹಟದ ಶ್ರೀಗಳು ಆ ಕ್ಷೇತ್ರದ ಸರ್ವತೋಮುಖ ಮತ್ತು ಸರ್ವಾಂಗೀಣ ಪ್ರಗತಿಗಾಗಿ ಶ್ರಮಿಸತೊಡಗಿದರು. ಶ್ರೀಗಳಿಂದಾಗಿ ಕಾಲನ ಹೊಡೆತಕ್ಕೆ ಸಿಕ್ಕು ಜರ್ಜರಿತವಾಗಿದ್ದ ಅಲ್ಲಿನ ದೇವಾಲಯಗಳು ಪುನರ್ನವೀಕರಣಗೊಂಡು ದರ್ಶನೀಯ ವೆನಿಸಿದವು. ಭೂಮಿಯ ಫಲವತತ್ತೆ ಹೆಚ್ಚಿತು. ಗದ್ದೆಗಳು ಗೆಲುವಾಗಿ ನಿಂತುಕೊಂಡವು. ಅಲ್ಲಿ ತಮ್ಮ ಕರ್ತೃತ್ವ ಶಕ್ತಿಯ ಸಾಮರ್ಥ್ಯವನ್ನು ಹೆಚ್ಚಿಸಿಕೊಂಡ ಶ್ರೀಗಳು ತಮ್ಮ ಒಡನಾಟದ ಕಾರ್ಯಕ್ಷೇತ್ರವನ್ನು ವಿಸ್ತರಿಸಿಕೊಂಡರು. ಶ್ರೀಮಠ ಹಾಗೂ ಶಿವಗಂಗಾ

ಕ್ಷೇತ್ರ ಶ್ರೀಗಳ 'ಗತಿಶೀಲ' ವ್ಯಕ್ತಿತ್ವದ ಸಂಪೂರ್ಣ ಲಾಭವನ್ನು ಪಡೆದುಕೊಂಡಿತು. ಶ್ರೀಗಳು ಅಲ್ಲಿ ಮೂರು ಮಾಧ್ಯಮಿಕ ಶಾಲೆಗಳಿಗೆ 'ಜನ್ಮ–ಮರುಜನ್ಮ'ಗಳನ್ನು ಕೊಟ್ಟರು. ಅದುವರೆಗೆ ಐತಿಹಾಸಿಕ ಕಾರಣದಿಂದ ಗುರುತಿಸಲ್ಪಡುತ್ತಲಿದ್ದ ಶಿವಗಂಗೆಯು ಶ್ರೀಗಳಿಂದಾಗಿ ಧಾರ್ಮಿಕವಾಗಿ, ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಗುರುತಿಸಲ್ಪಡುವಂತಾಯಿತು. ಶ್ರೀಗಳನ್ನು ಶಿವಗಂಗೆಯ ಜನತೆ 'ಅಭಿನವ ಭಗೀರಥ' ನೆಂದು ಅಭಿಮಾನದಿಂದ ಕೂಗಿ ಆದರಿಸಿತು.

## ಹುಬ್ಬಳ್ಳಿಯಲ್ಲಿ 'ಶಿವಾದ್ವೈತ ಸಾಹಿತ್ಯ ತಪಸ್ವಿ' :

೧೯೮೫ರಂದು ಉತ್ತರ ಕರ್ನಾಟಕದ ರಾಜಧಾನಿಯಾದ ಹುಬ್ಬಳ್ಳಿಯಲ್ಲಿ 'ಪಂಚಪೀಠಾಧೀಶ್ವರ'ರ ಅಡ್ಡಪಲ್ಲಕ್ಕಿ ಉತ್ಸವ ಹಾಗೂ ಧರ್ಮ–ಜಾಗೃತಿ ಸಮಾರಂಭವು ನಡೆಯಿತು. ಆ ಉತ್ಸವ ಹಾಗೂ ಸಮಾರಂಭದ ಮಧುರ ಕ್ಷಣಗಳು ಇನ್ನೂ ಜನ–ಮಾನಸದಲ್ಲಿ ಹಸಿರು–ಹಸಿರಾಗಿವೆ. ಆ ಕಾರ್ಯಕ್ರಮದ ಯಶಸ್ಸಿನ ರೂವಾರಿ ಹಳಿಯಾಳದ ಶ್ರೀ ಷ. ಬ್ರ. ಸಿದ್ಧಲಿಂಗ ಶಿವಾಚಾರ್ಯರು. ಉತ್ಸವ ಸಮಿತಿಯ ಉಪಾಧ್ಯಕ್ಷರಾಗಿದ್ದ ಶ್ರೀಗಳು ಅದುವರೆಗೆ ತಾವು ಸಂಪಾದಿಸಿಕೊಂಡಿದ್ದ ಅನುಭವದ 'ಆಯ–ಆದಾಯ'ವನ್ನೆಲ್ಲ ಸ್ವ–ಇಚ್ಛೆಯಿಂದ ಸ್ವಚ್ಛಂದವಾಗಿ ವೆಚ್ಚ ಮಾಡಿ ಆ ಕಾರ್ಯಕ್ರಮವು ವಿಸ್ತೃತ ಸ್ವರೂಪವನ್ನು ತಳೆಯುವುದಕ್ಕೆ ಕಾರಣರಾದರು. ಆ ಉತ್ಸವದ ಭವ್ಯ ಸ್ವರೂಪವನ್ನು ಮತ್ತು ಸಮಾರಂಭದ ಅಚ್ಚುಕಟ್ಟುತೆಯನ್ನು ಹುಬ್ಬಳ್ಳಿಯ ಜನತೆಯು ಹುಬ್ಬೇರಿಸಿ ನೋಡಿತು. ಹುಬ್ಬಳ್ಳಿಯ ಗಾಜಿನಮನೆ (Glass House) ಯಲ್ಲಿ ನಡೆದ ಲಿಂ. ಜ. ಪ್ರಸನ್ನ ರೇಣುಕ ವೀರ ರುದ್ರಮುನಿ ಶಿವಾಚಾರ್ಯ ಮಹಾಸ್ವಾಮಿಗಳವರ ದಸರಾ ದರ್ಬಾರ್ ಮತ್ತು ಧರ್ಮ–ಜಾಗೃತಿ ಸಭೆಯ ಹಿಂದಿರುವ ಕ್ರಿಯಾಶಕ್ತಿ ಶ್ರೀಗಳವರಾಗಿದ್ದರು. ಅಪೂರ್ವ ಜನಪ್ರಿಯತೆಯನ್ನು ಸಂಪಾದಿಸಿದ ದಸರಾ ದರ್ಬಾರ್‌ದ ಯಶಸ್ಸಿನಿಂದ ಆನಂದಿತರಾದ ಮತ್ತು ಧರ್ಮಕ್ಷೇತ್ರದ ಜೊತೆ ಜೊತೆಯಲ್ಲಿ ಸಾಹಿತ್ಯ ಕ್ಷೇತ್ರದಲ್ಲೂ ಕೃಷಿ ಮಾಡುತ್ತಿರುವ ಶ್ರೀಗಳ ಸಾಹಿತ್ಯಾಸಕ್ತಿಯನ್ನು ಪ್ರೋತ್ಸಾಹಿಸುತ್ತ ಜಗದ್ಗುರುಗಳು ಶ್ರೀಗಳಿಗೆ "ಶಿವಾದ್ವೈತ ಸಾಹಿತ್ಯ ತಪಸ್ವಿ" ಎಂಬ ಅಭಿಮಾನದ ಪ್ರಶಸ್ತಿಯನ್ನಿತ್ತು ಆಶೀರ್ವದಿಸಿದರು. ಇದೇ ಸಂದರ್ಭದಲ್ಲಿ ಶ್ರೀಗಳು ತಮ್ಮ ಸಂಪಾದಕತ್ವದ ಅಡಿಯಲ್ಲಿ 'ಧರ್ಮಜ್ಯೋತಿ' ಎಂಬ ಸ್ಮರಣ–ಸಂಚಿಕೆಯನ್ನು ಹೊರತಂದುದುದು ಗಮನಾರ್ಹ.

## ನೆಲಮಂಗಲದಲ್ಲಿ 'ಧರ್ಮಸಾಹಿತ್ಯಭೂಷಣ' :

ಬೆಂಗಳೂರು ಜಿಲ್ಲೆಯ ನೆಲಮಂಗಲ ಮತ್ತು ಅದರ ಸುತ್ತಮುತ್ತಣ ಭಾಗಗಳಲ್ಲಿ ಅದಾಗಲೇ ಸಾಕಷ್ಟು ಜನಪ್ರಿಯರಾಗಿದ್ದ ಶ್ರೀಗಳು ತಮ್ಮ ಜನಪ್ರಿಯತೆಯನ್ನು ಮತ್ತು

ಜಗದ್ಗುರುಗಳ ಆಶೀರ್ವಾದಗಳನ್ನು ಬಂಡವಾಳವನ್ನಾಗಿಸಿಕೊಂಡು ೧೯೭೯ ರಲ್ಲಿ ನೆಲಮಂಗಲದಲ್ಲಿ ಶ್ರೀಮದ್ರಂಭಾಪುರೀ ಜ. ವೀರ ರುದ್ರಮುನಿ ಶಿವಾಚಾರ್ಯ ಮಹಾಸ್ವಾಮಿಗಳವರ ದಸರಾ ದರ್ಬಾರವನ್ನು ಮತ್ತು ಧರ್ಮ–ಜಾಗೃತಿ ಸಭೆಯನ್ನು ಏರ್ಪಡಿಸಿದ್ದರು. ಆದರೆ ಕಾಶೀ ಶ್ರೀಪೀಠದ ಶ್ರೀ ವಿಶ್ವೇಶ್ವರ ಜಗದ್ಗುರುಗಳು ಆಕಸ್ಮಿಕವಾಗಿ ಶಿವಾಧೀನರಾದ ಕಾರಣ ಸನ್ನಿಧಿಯವರು ಕಾಶಿಗೆ ದಯಮಾಡಿಸಬೇಕಾಯಿತು. ಆ ಕಾರಣದಿಂದಾಗಿ ಅನಿವಾರ್ಯವಾಗಿ ದಸರಾ ದರ್ಬಾರವು ಆಗ ಸ್ಥಗಿತಗೊಂಡು ಮುಂದಿನ ವರ್ಷಕ್ಕೆ ಮುಂದೂಡಲ್ಪಟ್ಟಿತು. ಮತ್ತೆ ೧೯೮೦ ರಲ್ಲಿ ನಡೆದ ನೆಲಮಂಗಲದ ಶ್ರೀಮದ್ರಂಭಾಪುರೀ ಸನ್ನಿಧಿಯವರ ದಸರಾ ದರ್ಬಾರದ ಗೌರವಾಧ್ಯಕ್ಷರಾಗಿದ್ದ ಶ್ರೀಗಳು 'ಅ, ಬ, ಕ.....' ದಿಂದ ಮೊದಲು ಮಾಡಿಕೊಂಡು 'ಕ್ಷ, ಜ್ಞ' ದ ವರೆಗಿನ ಎಲ್ಲ ಕಾರ್ಯಕಲಾಪಗಳನ್ನು ಅತ್ಯಂತ ಯಶಸ್ವಿಯಾಗಿ ನೆರವೇರಿಸಿಕೊಟ್ಟರು. ಶ್ರೀಗಳ ಸಮರ್ಥ ಕರ್ತೃತ್ವ ಶಕ್ತಿಯನ್ನು, ನೇತೃತ್ವ ಶಕ್ತಿಯನ್ನು ಮತ್ತು ಅವರಲ್ಲಿನ 'ಸಾಹಿತ್ಯ–ಸರಸ್ವತಿ'ಯನ್ನು ಅಭಿನಂದಿಸುತ್ತ ಅವರ ಧರ್ಮಪ್ರೇಮವನ್ನು ಕೊಂಡಾಡುತ್ತ ಜಗದ್ಗುರುಗಳು ಶ್ರೀಗಳಿಗೆ 'ಧರ್ಮಸಾಹಿತ್ಯಭೂಷಣ' ಎಂಬ ಗೌರವ ಪ್ರಶಸ್ತಿಯನ್ನಿತ್ತು ತುಂಬು ಹೃದಯದಿಂದ ಆಶೀರ್ವದಿಸಿದರು.

### ಉಭಯ–ಕೃಷಿಕರು :

ಮೊದಲಿನಿಂದಲೂ ಸಾಹಿತ್ಯ–ವಾಚನ ಹಾಗೂ ಸಾಹಿತ್ಯ–ರಚನಾ–ಕ್ಷೇತ್ರದಲ್ಲಿ ಅಭಿರುಚಿಯನ್ನು ಹೊಂದಿದ್ದ ಶ್ರೀಗಳು ತಮ್ಮ ಭಾವ–ಭಾವನೆಗಳನ್ನು ಮತ್ತು ಅನಿಸಿಕೆಗಳನ್ನೆಲ್ಲ ಅಕ್ಷರಿಸುವ ಅಭ್ಯಾಸ ಮತ್ತು ಹವ್ಯಾಸಗಳನ್ನು ಹೊಂದಿದ್ದರು. ಅನೇಕ ಚಿಕ್ಕ ಪುಟ್ಟ ಗ್ರಂಥಗಳು ಅವರ 'ಸಾಹಿತ್ಯ–ಸೌಧ'ದಿಂದ ಹೊರಬಂದಿವೆ. ೧೯೭೭ ರಿಂದ ೧೯೮೪ ರ ವರೆಗೆ **'ಅಮರ ಜೀವನ'** ಎಂಬ ಧಾರ್ಮಿಕ ಪತ್ರಿಕೆಯ ಸಂಪಾದಕರಾಗಿ ಶ್ರೀಗಳು ಕಾರ್ಯನಿರ್ವಹಿಸಿದರು. ಪೂಜ್ಯರು ಉತ್ತಮ ಲೇಖಕರು ಮತ್ತು ಬರಹಗಾರರು ಆಗಿರುವಂತೆ ಅತ್ಯುತ್ತಮ ವಾಗ್ಮಿಗಳಾಗಿಯೂ ಹೆಸರು ಮಾಡಿದರು. ಹಳಿಯಾಳ, ಕೊಟ್ಟೂರು, ಹೂಲಿ, ರಂಭಾಪುರಿ ಪೀಠ, ಕುಂದಗೋಳ, ಹರಿಹರ......... ಮೊದಲಾದ ಸ್ಥಳಗಳಲ್ಲಿ ಅವರು ತಮ್ಮ ಪ್ರಭಾವೀ ಪ್ರವಚನ–ಉಪನ್ಯಾಸಗಳಿಂದ ಜನ–ಮನವನ್ನು ಗೆದ್ದು ಜನರ ಧಾರ್ಮಿಕ ಭಾವ–ಭಾವನೆಗಳನ್ನು ಹಿತವಾಗಿ ಸ್ಪರ್ಶಿಸಿದರು.

### ಆ ಬಂಧ ಅನುಬಂಧ :

ಶ್ರೀ ಜಗದ್ಗುರು ವೀರ.ರುದ್ರಮುನಿ ಶಿವಾಚಾರ್ಯರಿಗೆ ಶ್ರೀಗಳೆಂದರೆ ತುಂಬಾ ಪ್ರೀತಿ. ಶ್ರೀಗಳ ಸದಾ 'ಜಾಗೃತ' ವ್ಯಕ್ತಿತ್ವದಿಂದ ಅವರು ಪ್ರಸನ್ನರೂ ಪ್ರಭಾವಿತರೂ

ಆಗಿದ್ದರು. ಶ್ರೀಗಳಿಗೂ ಕೂಡ ಸನ್ನಿಧಿಯವರಲ್ಲಿ ಸೀಮೆ ಇಲ್ಲದ ನಿಸ್ಸೀಮ ಭಕ್ತಿ ಮತ್ತು ಗೌರವ. ಸನ್ನಿಧಿಯವಿದ್ದಲ್ಲಿ ಶ್ರೀಗಳು ಇರಲೇಬೇಕು. ಶ್ರೀಗಳು ಸನ್ನಿಧಿಯವರ ಅವಿಭಾಜ್ಯ ಅಂಗದಂತಿದ್ದರು. ಸನ್ನಿಧಿಯವರಿದ್ದಲ್ಲಿ ಶ್ರೀಗಳು ಇದ್ದೇ ಇರುತ್ತಾರೆ ಮತ್ತು ಶ್ರೀಗಳಿದ್ದಲ್ಲಿ ಸನ್ನಿಧಿಯವರ ವಾಸ್ತವ್ಯ ಇದ್ದೇ ಇರುತ್ತದೆ ಎಂದು ಜನ ಪರಸ್ಪರ ತಮ್ಮಲ್ಲಿಯೇ ಅಂದುಕೊಳ್ಳುತ್ತಿದ್ದರು. ಸನ್ನಿಧಿಯವರ ಬಲಗೈಯಾಗಿದ್ದರು ಶ್ರೀಗಳು. ಸನ್ನಿಧಿಯವರ ಆಶಯಗಳೆಲ್ಲ ಶ್ರೀಗಳಲ್ಲಿ ಆಕಾರ ತಳೆಯುತ್ತಿದ್ದವು. ಅವರ ಕಲ್ಪನೆಗಳೆಲ್ಲ ಇವರಲ್ಲಿ ಕಾರ್ಯರೂಪಕ್ಕಿಳಿಯುತ್ತಲಿದ್ದವು.

## ಹೊಣೆಗಾರಿಕೆಯ ಉಯಿಲು :

ಜಗದ್ಗುರು ಮಹಾಸನ್ನಿಧಾನವು ಅಸ್ವಸ್ಥವಾದಾಗ ಶ್ರೀಗಳು ಅವರ ಸೇವೆಯಲ್ಲಿ 'ಅರ್ಜುನ ಏಕಾಗ್ರತೆ'ಯಿಂದ ತತ್ಪರರಾದರು. ಶ್ರೀಗಳಲ್ಲಿ ತಮ್ಮ ಸಮರ್ಥ 'ಉತ್ತರಾಧಿಕಾರಿ' ಯನ್ನು ಕಂಡುಕೊಂಡ ಸನ್ನಿಧಿಯವರು ಅವರ ಹೆಸರಿನಲ್ಲಿ ಉಯಿಲನ್ನು ಬರೆದರು. ಸನ್ನಿಧಿಯವರು ಶಿವಗಂಗೆಯ ಮೇಲಣಗವಿ ಮಠಾಧ್ಯಕ್ಷರಾದ ಶ್ರೀ ಷ. ಬ್ರ. ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳ ಹೆಸರಿನಲ್ಲಿ ಬರೆದ ಉತ್ತರಾಧಿಕಾರದ ಉಯಿಲನ್ನು ದಿನಾಂಕ : ೮–೮–೧೯೯೧ ರಂದು ಕರ್ನಾಟಕದ ರಾಜಧಾನಿ ಬೆಂಗಳೂರು ನಗರದ ಜಿಲ್ಲಾ ಕಛೇರಿಯಲ್ಲಿ ನೋಂದಾಯಿಸಲ್ಪಡುವ ಮೂಲಕ ಅದನ್ನು ಕಾನೂನುಬದ್ಧ–ಗೊಳಿಸಲಾಯಿತು. ಉಯಿಲಿನ ಕಾನೂನೀಕರಣವಾದ ಎಂಟೊಂಬತ್ತು ದಿನಗಳಲ್ಲಿಯೇ ಸನ್ನಿಧಿಯವರು ತಮ್ಮ ಇಹಲೋಕದ ಯಾತ್ರೆಗೆ ಪೂರ್ಣವಿರಾಮವನ್ನು ಕೊಟ್ಟು ಶಿವಾಧೀನರಾದರು. ತಮ್ಮ ಹೊಣೆಗಾರಿಕೆಯನ್ನು ಸಮರ್ಥ ಹೆಗಲುಗಳಿಗೆ ವರ್ಗಾಯಿಸಿದ ಸಂತೃಪ್ತಿ ಮತ್ತು ಪ್ರಸನ್ನತೆ ಅವರ ಮುಖದಲ್ಲಿ ತುಂಬಿಕೊಂಡಿತ್ತು.

## ಜಗದ್ಗುರು ಪಟ್ಟಾಭಿಷೇಕ :

ಲಿಂಗೈಕ್ಯ ಜಗದ್ಗುರುಗಳ ಉಯಿಲಿನ ಆದೇಶದಂತೆ ಮತ್ತು ಅವರ ಅಂತಿಮ ಇಚ್ಛೆಯಂತೆ ಶ್ರೀಮದ್ರಂಭಾಪುರಿ ಪೀಠದ ಭಕ್ತರೆಲ್ಲ ಸೇರಿ ದಿನಾಂಕ : ೬–೨–೧೯೯೨ ರಂದು ಶ್ರೀಪೀಠದಲ್ಲಿ ಶ್ರೀಗಳಿಗೆ 'ಜಗದ್ಗುರು ಪಟ್ಟಾಭಿಷೇಕ'ವನ್ನು ಮಾಡಿದರು. ಈ ಪವಿತ್ರ ಮಂಗಲಕಾರ್ಯವು ಶ್ರೀಮದುಜ್ಜಯಿನಿ, ಶ್ರೀಮತ್ ಹಿಮವತ್ಕೇದಾರ, ಶ್ರೀಮತ್ ಶ್ರೀಶೈಲ ಮತ್ತು ಶ್ರೀಮತ್ಕಾಶೀ ಜಗದ್ಗುರುಗಳವರ ದಿವ್ಯ ಸಾನ್ನಿಧ್ಯದಲ್ಲಿ ಅತ್ಯಂತ ಅದ್ದೂರಿಯಿಂದ ನಡೆಯಿತು. ಈ ಎಲ್ಲ ಪೀಠಾಧೀಶ್ವರರು ಈ ಕಾರ್ಯಕ್ರಮದಲ್ಲಿ ತುಂಬು ಹೃದಯದಿಂದ ಸಾನ್ನಿಧ್ಯ ವಹಿಸಿ ಕಾರ್ಯಕ್ರಮದ ಯಶಸ್ಸಿಗೆ ಕಾರಣರಾದರು. ನಾಡಿನ ಮತ್ತು ಹೊರ ನಾಡಿನ ಮೂಲೆ--ಮೂಲೆಗಳಿಂದ ಆಗಮಿಸಿದ ಶಿವಾಚಾರ್ಯರು,

ವಿದ್ವಾಂಸರು, ಕಲಾವಿದರು, ಗಣ್ಯರು ಪರಮಪೂಜ್ಯರ 'ಜಗದ್ಗುರು ಪಟ್ಟಾಭಿಷೇಕ' ಸಮಾರಂಭದ ತೂಕವನ್ನು ಹೆಚ್ಚಿಸಿದರು. ಅಸಂಖ್ಯಾತ ಭಕ್ತ ಜನಗಳ ಕಣ್ಣುಗಳು ಈ ಎಲ್ಲ ಕಾರ್ಯಕ್ರಮಗಳನ್ನು ಸಾಕ್ಷಿಸಿ ಆನಂದಿಸಿದವು.

## ವೀರ 'ಸೋಮೇಶ್ವರ' :

ಇದೇ ಸಂದರ್ಭದಲ್ಲಿ ಶ್ರೀಮದ್ ರಂಭಾಪುರೀ ಮಹಾಪೀಠದ ನೂತನ ಜಗದ್ಗುರುಗಳಿಗೆ "ಶ್ರೀ ೧೨೧ನೆಯ ಜಗದ್ಗುರು ಪ್ರಸನ್ನ ರೇಣುಕ ವೀರ ಸೋಮೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳು" ಎಂಬ ನೂತನ ನಾಮಕರಣವನ್ನು ಮಾಡಲಾಯಿತು. ಈ ನೂತನ ನಾಮಕರಣದ ಒಂದು ವೈಶಿಷ್ಟ್ಯವೇನೆಂದರೆ– ಈ ಶ್ರೀಪೀಠ ಪರಂಪರೆಯಲ್ಲಿ ಇದುವರೆಗೆ ೧೨೦ ಜಗದ್ಗುರುಗಳು ಆಗಿಹೋಗಿದ್ದರೂ ಯಾರೂ ಈ ಅಭಿದಾನವನ್ನು ಹೊಂದಿಲ್ಲ. ಶ್ರೀಪೀಠದ ಆದಿ ಜಗದ್ಗುರುಗಳು ಕೊಲನುಪಾಕಿಯ ಶ್ರೀ ಸೋಮೇಶ್ವರ ಲಿಂಗದಿಂದ ಉದ್ಭವಿಸಿದ್ದರೂ ಯಾರೂ ಆ ಮೂಲ ಸೋಮೇಶ್ವರ ಲಿಂಗದ ಲಿಂಗನಾಮವನ್ನು ಹೊಂದದಿರುವುದು ಆಶ್ಚರ್ಯಕರವಾಗಿದೆ. ಆದರೆ ಸದ್ಯದ ನಮ್ಮ ನೂತನ ಜಗದ್ಗುರುಗಳು ಪ್ರಪ್ರಥಮ ಬಾರಿಗೆ ಆ ಸೋಮೇಶ್ವರ ಲಿಂಗದ ನಾಮವನ್ನು ಹೊಂದಿರುವ ಮೂಲಕ 'ಹೊಸ ಇತಿಹಾಸ'ವನ್ನು ಬರೆಯುವದಷ್ಟೇ ಅಲ್ಲ, ಆ ಮೂಲಕ ತಮ್ಮ ಆದಿ ಆಚಾರ್ಯರುಗಳ ಉದ್ಭವಕ್ಕೆ ಅವಕಾಶ ಕೊಟ್ಟ ಆ ಲಿಂಗಕ್ಕೆ ಕೃತಜ್ಞತೆಯನ್ನು ಸಲ್ಲಿಸಿದ್ದಾರೆ. ಇತಿಹಾಸವನ್ನು ದಾಖಲಿಸುವ ಜೊತೆ–ಜೊತೆಯಲ್ಲಿ ಪರಮಪೂಜ್ಯ ನೂತನ ಜಗದ್ಗುರುಗಳು ಹೊಸ ಇತಿಹಾಸವನ್ನು ಸೃಷ್ಟಿಸಿದ್ದಾರೆ.

## ಏನು ಮತ್ತು ಏನೇನು ? :

ಶ್ರೀ ಜಗದ್ಗುರು ಮಹಾಸನ್ನಿಧಾನವು ಶ್ರೀಪೀಠದ 'ವೀರ ಸಿಂಹಾಸನ'ವನ್ನು ಆರೋಹಣ ಮಾಡುತ್ತಲೇ ನೀಡಿದ ತಮ್ಮ ಮೊದಲ ಆಶೀರ್ವಾದ–ಸಂದೇಶದಲ್ಲಿ ಜನ–ಮನದಲ್ಲಿ ಮತ್ತು ಭಕ್ತ–ಮಾನಸದಲ್ಲಿ ಹೊಸ ಭರವಸೆಯನ್ನು ಮೂಡಿಸಿದ್ದಾರೆ. ಅಂದಿನ ಅವರ ಆಶೀರ್ವಚನ ಮತ್ತು ಧರ್ಮ–ಸಂದೇಶಗಳು ಹಾಗೂ ಲೋಕೋದ್ಧಾರದ ಪ್ರಾಂಜಲ ಪ್ರತಿಜ್ಞೆಗಳು ಮತ್ತೆ ಮತ್ತೆ ಮೆಲುಕು ಹಾಕುವಂತಿವೆ. ವೀರಶೈವ ಧರ್ಮ ಹಾಗೂ ಸಮಾಜದ ಉತ್ತರೋತ್ತರ ಅಭಿವೃದ್ಧಿಗಾಗಿ ಹತ್ತು ಹಲವು ಯೋಜನೆಗಳನ್ನು ಹಮ್ಮಿಕೊಂಡಿರುವ ಅವರು ಅಂದು ತಮ್ಮ ಅಸಂಖ್ಯಾತ ಅಭಿಮಾನಿ ಭಕ್ತರ ಮುಂದೆ 'ಯೋಜನಾಷ್ಟಕ'ವೊಂದನ್ನು ಪ್ರಕಟಿಸಿದರು. ಅವರ ಯೋಜನಾಷ್ಟಕವು ಈಗಾಗಲೇ ಕಾರ್ಯರೂಪಕ್ಕೆ ಬಂದಿದ್ದು ಜನಹಿತದ ಕಲ್ಯಾಣ–ಕಾರ್ಯಗಳಲ್ಲಿ ತನ್ನನ್ನು ತಾನು ಸಕ್ರಿಯವಾಗಿ ತೊಡಗಿಸಿಕೊಂಡಿದೆ.

### ಯೋಜನಾಷ್ಟಕ :

ಪರಮಪೂಜ್ಯ ಸನ್ನಿಧಿಯವರು ಹಮ್ಮಿಕೊಂಡ ಎಂಟು ಅಂಶದ ಕಾರ್ಯಕ್ರಮಗಳು ಅಥವಾ ಅವರ 'ಯೋಜನಾಷ್ಟಕ'ವು ಇಂತಿದೆ–

೧. ಶ್ರೀಪೀಠದಲ್ಲಿ ನಿತ್ಯ ದಾಸೋಹವನ್ನು ನಡೆಯಿಸುವುದು.

೨. ಶ್ರೀಪೀಠದ ಆಡಳಿತದಲ್ಲಿ ಚುರುಕುತನವನ್ನು ತರುವುದು.

೩. ಶ್ರೀಪೀಠದಲ್ಲಿ ಗುರುಕುಲ ಸ್ಥಾಪನೆ ಮಾಡುವುದು.

೪. ಶ್ರೀಪೀಠದಲ್ಲಿ ಶ್ರೀ ಜಗದ್ಗುರು ರೇಣುಕಾಚಾರ್ಯ ಶಿಕ್ಷಣ ಪ್ರತಿಷ್ಠಾನವನ್ನು ಸ್ಥಾಪಿಸಿ ಆ ಮೂಲಕ ನಾಡಿನಾದ್ಯಂತ ಶಿಕ್ಷಣ–ಸಂಸ್ಥೆಗಳನ್ನು ಪ್ರೋತ್ಸಾಹಿಸಿ ಶಿಕ್ಷಣ ಹಾಗೂ ಸಂಸ್ಕೃತಿಗಳನ್ನು ಬೆಳಗಿಸುವುದು.

೫. ಶ್ರೀಪೀಠದಿಂದ ವೀರಶೈವ ಧಾರ್ಮಿಕ ಸಾಹಿತ್ಯವನ್ನು ಪ್ರಕಟಿಸಿ ಜನತೆಯ ಬಡ ಜೇಬಿಗೆ ಎಟಕುವ ಬೆಲೆಯಲ್ಲಿ ಅದನ್ನು ಮಾರಾಟ ಮಾಡಿ ವೀರಶೈವ ಹಾಗೂ ಶಿವಾಗಮ ಸಾಹಿತ್ಯವನ್ನು ಮನೆ–ಮನೆಗೆ ತಲುಪಿಸುವುದು.

೬. ಪ್ರಚಾರ ಮತ್ತು ಪ್ರಸಾರ ಮಾಧ್ಯಮಗಳನ್ನು ಚೆನ್ನಾಗಿ ಬಳಸಿಕೊಳ್ಳುವುದು.

೭. ಪ್ರತಿವರ್ಷ ಶ್ರಾವಣ ಮಾಸದ ತಪೋನುಷ್ಠಾನವನ್ನು ಶ್ರೀಪೀಠದಲ್ಲಿ ನೆರವೇರಿಸಿ ಜನತೆಯೊಂದಿಗೆ ನೇರ ಹಾಗೂ ನಿಕಟ ಸಂಪರ್ಕವನ್ನು ಹೊಂದುವುದು.

8. ಶ್ರೀಪೀಠದಲ್ಲಿ ಪೀಠಾಚಾರ್ಯರ ವಾಸ್ತವ್ಯದ ಅವಧಿಯನ್ನು ಹೆಚ್ಚಿಸುವುದು ಮತ್ತು ಪ್ರತಿ ಪೌರ್ಣಿಮೆಯಂದು ಪೀಠಾಚಾರ್ಯರು ಪೀಠದಲ್ಲಿದ್ದು ಬಂದ ಭಕ್ತಾದಿಗಳಿಗೆ ದರ್ಶನ ನೀಡುವುದು.

### ಯೋಜನೆ ಮತ್ತು ಸಾಧನೆ :

ಪರಮಪೂಜ್ಯ ಸನ್ನಿಧಿಯವರು ಈಗಾಗಲೇ ಈ 'ಯೋಜನಾಷ್ಟಕ'ವನ್ನು ಜಾರಿಯಲ್ಲಿ ತಂದಿದ್ದು ಶ್ರೀಪೀಠದ 'ಗತಿ–ವಿಧಾನ'ಗಳನ್ನು ಮತ್ತು ಕಾರ್ಯವೈಖರಿಯನ್ನು ಸಾಕಷ್ಟು ಚುರುಕುಗೊಳಿಸಿದ್ದಾರೆ. ಜಗದ್ಗುರುಗಳು ತಾವಂದು ಅಂದುಕೊಂಡಿದುದನ್ನೆಲ್ಲ ಮಾಡಿ ತೋರಿಸಿದ್ದಾರೆ.

ಈಗಾಗಲೇ ಶ್ರೀಪೀಠದಲ್ಲಿ ಶ್ರೀ ಜಗದ್ಗುರು ರೇಣುಕಾಚಾರ್ಯ ನಿತ್ಯ ದಾಸೋಹ ನಿಧಿಯನ್ನು ಸ್ಥಾಪಿಸಿ ಆ ನಿಧಿಯಲ್ಲಿ ಸಂಗ್ರಹಿಸಲ್ಪಟ್ಟ ದುಡ್ಡಿನಿಂದ ಶ್ರೀಪೀಠಕ್ಕೆ ಬಂದ ಯಾತ್ರಾರ್ಥಿಗಳಿಗೆ ನಿತ್ಯ ದಾಸೋಹ ನಡೆದಿದೆ. ಶ್ರೀಪೀಠದ ಆಡಳಿತವು ಈಗಾಗಲೇ ಚುರುಕುತನವನ್ನು ಕಂಡುಕೊಂಡಿದೆ. ಶ್ರೀಪೀಠದ ಸರ್ವಾಂಗೀಣ ಪ್ರಗತಿಗಾಗಿ ಶ್ರೀಪೀಠದ ಆಡಳಿತ–ಯಂತ್ರವು ಭರದಿಂದ ದುಡಿಯುತ್ತಲಿದೆ. ಈ ದಿಶೆಯಲ್ಲಿ ಶ್ರೀಪೀಠದಲ್ಲಿನ

ದೇವಾಲಯಗಳ ಪುನರ್ನವೀಕರಣ ಕಾರ್ಯಗಳು ಭರದಿಂದ ನಡೆದಿವೆ. ಈಗಾಗಲೇ ಶ್ರೀ ವೀರಭದ್ರ ಸ್ವಾಮಿಯ ದೇವಾಲಯವು ಪುನರ್ನವೀಕರಣಗೊಂಡಿದೆ. ಗುರು ಸ್ಮಾರಕಗಳ ನವೀಕರಣ ಕಾರ್ಯ ನಡೆಯುತ್ತಲಿದೆ. ಅಲ್ಲಲ್ಲಿ ಅನೇಕ ಹೊಸ ಕಟ್ಟಡಗಳು ತಲೆಯೆತ್ತಿ ನಿಂತುಕೊಳ್ಳುತ್ತಲಿವೆ. ಶ್ರೀಪೀಠದಲ್ಲಿ ಈಗಾಗಲೇ 'ಶ್ರೀ ಜಗದ್ಗುರು ರೇಣುಕಾಚಾರ್ಯ ಗುರುಕುಲ'ವು ಸ್ಥಾಪಿಸಲ್ಪಟ್ಟಿದ್ದು ಆ ಗುರುಕುಲದಲ್ಲಿ ಸುಮಾರು ಎಪ್ಪತ್ತಕ್ಕೂ ಹೆಚ್ಚು ವಿದ್ಯಾರ್ಥಿಗಳು ಗುರುಕುಲವಾಸಿಗಳಾಗಿದ್ದುಕೊಂಡು ವಿದ್ಯಾಭ್ಯಾಸವನ್ನು ಮಾಡುತ್ತಲಿದ್ದಾರೆ. ಶ್ರೀಪೀಠದಲ್ಲಿ ಜಗದ್ಗುರು ರೇಣುಕಾಚಾರ್ಯರ ಹೆಸರಿನಲ್ಲಿ ಶಿಕ್ಷಣ ಪ್ರತಿಷ್ಠಾನವೊಂದು ಸ್ಥಾಪಿಸಲ್ಪಟ್ಟಿದ್ದು ಈಗಾಗಲೇ ಆ ಪ್ರತಿಷ್ಠಾನದ ಪವಿತ್ರ ಸಂಕಲ್ಪದಂತೆ ಶ್ರೀಪೀಠದಲ್ಲಿ ಹಾಗೂ ನಾಡಿನ ಇತರೆಡೆಗಳಲ್ಲಿ ಪ್ರಾಥಮಿಕ ಹಾಗೂ ಮಾಧ್ಯಮಿಕ ಸ್ಕೂಲು, ಕಾಲೇಜುಗಳು ತೆರೆಯಲ್ಪಟ್ಟಿವೆ. ಈ ದಿಶೆಯಲ್ಲಿ ಈಗಾಗಲೇ ಧಾರವಾಡ ಜಿಲ್ಲೆಯ ಶಿಗ್ಗಾವಿ ತಾಲ್ಲೂಕಿನ ತಿರುಮಲಕೊಪ್ಪದಲ್ಲಿ 'ಶ್ರೀ ರಂಭಾಪುರೀ ಜಗದ್ಗುರು ವೀರ ಗಂಗಾಧರ ಪ್ರೌಢಶಾಲೆ'ಯನ್ನು ಪ್ರಾರಂಭಿಸಲಾಗಿದೆ. ಶ್ರೀಪೀಠದಲ್ಲಿ ಲಿಂ. ಜ. ವೀರರುದ್ರಮುನಿ ಶಿವಾಚಾರ್ಯ ಮಹಾಸ್ವಾಮಿಗಳವರ ಹೆಸರಿನಲ್ಲಿ ಒಂದು ವಸತಿ ಪ್ರೌಢ ಶಾಲೆಯನ್ನು ಪ್ರಾರಂಭಿಸಲಾಗಿದೆ. ಈಗಾಗಲೇ ಸಾಕಷ್ಟು ವಿದ್ಯಾರ್ಥಿಗಳು ಅಲ್ಲಿ ಓದುತ್ತಲಿದ್ದಾರೆ. ೧೯೮೩ರ ಪ್ರಾರಂಭದಲ್ಲಿ ವಿಜಾಪುರ ಜಿಲ್ಲೆಯ ಇಂಡಿ ತಾಲ್ಲೂಕಿನ ಝಳಕಿಯಲ್ಲಿ ಶ್ರೀ ಜಗದ್ಗುರು ರಂಭಾಪುರೀಶ್ವರ ಪ್ರೌಢಶಾಲೆಯನ್ನು ಪ್ರಾರಂಭಿಸಲಾಗಿದೆ. ಗೋಕಾಕ ತಾಲ್ಲೂಕಿನ ಸುಲ್ತಾನಪುರದಲ್ಲಿ ವೈದಿಕ ಪಾಠಶಾಲೆಯನ್ನು ತೆರೆಯಲಾಗಿದೆ. ಇದು ಅಲ್ಲದೆ, ವರ್ತಮಾನ ಜಗದ್ಗುರುಗಳವರ ಪ್ರೇರಣೆ ಮತ್ತು ಪ್ರೋತ್ಸಾಹಗಳಿಂದ ನಾಡಿನಾದ್ಯಂತ ಅನೇಕ ನೂತನ ಶಿಕ್ಷಣ-ಸಂಸ್ಥೆಗಳು ತೆರೆಯಲ್ಪಟ್ಟಿದ್ದು ತಮ್ಮ ಕಾರ್ಯವನ್ನು ಪ್ರಾರಂಭಮಾಡಿವೆ. ಶ್ರೀಪೀಠದಲ್ಲಿ ತಾಂತ್ರಿಕ ಶಿಕ್ಷಣ ತರಬೇತಿ ಮಹಾವಿದ್ಯಾಲಯವೊಂದನ್ನು ಸ್ಥಾಪಿಸಬೇಕು ಎಂಬ ಇಚ್ಛೆ ಸನ್ನಿಧಿಯವರದಾಗಿದೆ. ಅದಕ್ಕಾಗಿ ಪ್ರಯತ್ನಗಳು ತ್ವರಿತವಾಗಿ ನಡೆದಿವೆ. ಈ ವಿಧವಾಗಿ ಶ್ರೀಪೀಠವು ತನ್ನ 'ಶೈಕ್ಷಣಿಕ ಬಾಹು'ಗಳನ್ನು ದಿನೇ ದಿನೇ ವಿಸ್ತರಿಸಿಕೊಳ್ಳತೊಡಗಿದೆ.

## ಸಾಹಿತ್ಯ ಮತ್ತು ಸೃಷ್ಟಿ :

ಶ್ರೀಪೀಠವು ಧಾರ್ಮಿಕ ಸಾಹಿತ್ಯಕ್ಕೆ ಆದ್ಯತೆಯನ್ನಿತ್ತು ಈಗಾಗಲೇ ಹತ್ತು ಹಲವು ಚಿಕ್ಕಪುಟ್ಟ ಹೊತ್ತಿಗೆಗಳನ್ನು ಹೊರತಂದಿದೆ. ಅವುಗಳ ಬೆಲೆ ಭಕ್ತರ ಬಡ ಜೇಬಿಗೆ ಎಟಕುವಂತಿರುವುದೊಂದು ಸಂತೋಷದ ವಿಷಯ. ಶಿವಾಗಮಗಳು ಮತ್ತು ಶಿವಸಾಹಿತ್ಯ ದಿನೇ ದಿನೇ ಸಮೃದ್ಧವಾಗಿ ಹೊರಬರುತ್ತಲಿದೆ. ಶ್ರೀಪೀಠದಿಂದ 'ರಂಭಾಪುರಿ ಬೆಳಗು' ಎಂಬ ದ್ವೈಮಾಸಿಕ ಪತ್ರಿಕೆಯು ಪ್ರಕಟವಾಗುತ್ತಲಿದ್ದು ಅದು ಜನಾನುರಾಗವನ್ನು ಗಳಿಸಿದೆ. ಶ್ರೀಪೀಠದಿಂದ ಈಗಾಗಲೇ ಶಾಸ್ತ್ರೋಕ್ತ ಶಿವಪೂಜಾ ವಿಧಿ-ವಿಧಾನಗಳು,

ಮಂಗಲ–ಗೀತೆಗಳು, ವೀರಶೈವ–ಧರ್ಮ ಸಾಹಿತ್ಯ–ಕೈಪಿಡಿಗಳು, ಧರ್ಮ–ಸಂದೇಶ ಇತ್ಯಾದಿ ಕಿರುಹೊತ್ತಿಗೆಗಳು ಬಹುದೊಡ್ಡ ಪ್ರಮಾಣದಲ್ಲಿ ಪ್ರಕಟಗೊಂಡಿವೆ. 'ವೀರಾಗಮ' ಎಂಬ ಬೃಹತ್ ಗ್ರಂಥವೊಂದು ಶ್ರೀಪೀಠದಿಂದ ಬಿಡುಗಡೆಯಾಗಿದ್ದು ಅದೀಗ ವಿದ್ವತ್ ಲೋಕದಲ್ಲಿ ಸಂಚರಿಸುತ್ತಲಿದೆ. ಶ್ರೀ ಜಗದ್ಗುರು ರೇಣುಕಾಚಾರ್ಯ ಸುಪ್ರಭಾತ, ಶ್ರೀ ಜಗದ್ಗುರು ರೇಣುಕ ಲೀಲಾಮೃತ (ನಾಟಕ) ಇತ್ಯಾದಿ ಧ್ವನಿ–ಸುರುಳಿಗಳು (ಕ್ಯಾಸೆಟ್‌ಗಳು) ಶ್ರೀಪೀಠದಿಂದ ಬಿಡುಗಡೆಗೊಂಡಿದ್ದು ನಾಡು ಹಾಗೂ ನಾಡಿಗರ ನಾಲಿಗೆಯ ತುದಿಯ ಮೇಲೆ ನರ್ತಿಸುತ್ತಲಿವೆ.

## ಪ್ರಚಾರ ಮತ್ತು ಪ್ರಸಾರ :

ನೂತನ ಪೀಠಾಧೀಶ್ವರರ ಅವಿರತ ಪರಿಶ್ರಮದಿಂದ ಶ್ರೀಪೀಠವು ಈಗಾಗಲೇ ಈ ನಿಟ್ಟಿನಲ್ಲಿ ದಾಪುಗಾಲು ಇಡುತ್ತ ಮುನ್ನಡೆದಿದೆ. ಶ್ರೀಪೀಠದ ಕ್ರಿಯಾಶೀಲತೆ ಜನರಿಗೆ ಅರ್ಥವಾಗುತ್ತಿದೆ. ಸನ್ನಿಧಿಯವರು ಬಿಡುವಿಲ್ಲದ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಧರ್ಮಪ್ರಚಾರವನ್ನು ಮಾಡುತ್ತಲಿದ್ದಾರೆ. ಅಲ್ಲಲ್ಲಿ ಧರ್ಮ–ಜಾಗೃತಿ ಸಭೆ ಮತ್ತು ಸರ್ವಧರ್ಮಸಭೆಗಳನ್ನು ಏರ್ಪಡಿಸುತ್ತಾರೆ. ಮಿಂಚಿನ ವೇಗದಲ್ಲಿ ಸಂಚರಿಸುವ ಸನ್ನಿಧಿಗಳಿಗೆ ಬಿಡುವಿಲ್ಲದಂತೆ ಕಾರ್ಯಕ್ರಮಗಳು. ಆಯಾ ಭಾಗದ ಶಿವಾಚಾರ್ಯರನ್ನು, ವಿದ್ವಾಂಸರನ್ನು, ಗಣ್ಯರನ್ನು, ಕಲಾವಿದರನ್ನು ಪ್ರೋತ್ಸಾಹಿಸುವ ಮೂಲಕ ಜಗದ್ಗುರುಗಳು ಅವರೆಲ್ಲರ ಅಭಿಮಾನವನ್ನು ಸೂರೆಗೊಂಡಿದ್ದಾರೆ ಮತ್ತು ಅವರೆಲ್ಲರೂ ಶ್ರೀಪೀಠದ ಸೇವಾ–ವಾಹಿನಿಯಲ್ಲಿ ಪ್ರಾಂಜಲವಾಗಿ ತೊಡಗಿಕೊಳ್ಳುವಂತೆ ಮಾಡಿದ್ದಾರೆ. ನಾಡಿನ ಪ್ರಮುಖ ಪತ್ರಿಕೆಗಳೊಂದಿಗೆ ಹದುಳ ಸಂಬಂಧವನ್ನು ಇರಿಸಿಕೊಂಡ ಪರಮಪೂಜ್ಯರು ಪ್ರಸಾರ ಮಾಧ್ಯಮಗಳ ಮೂಲಕ ಪ್ರತಿ ಮನೆ–ಮನೆಯನ್ನು ಮುಟ್ಟುತ್ತಲಿದ್ದಾರೆ. ಜನತೆಯೊಂದಿಗೆ ಮತ್ತು ಭಕ್ತರೊಂದಿಗೆ ನಿಕಟ ಸಂಪರ್ಕವನ್ನು ಹೊಂದಿರುವ ಜಗದ್ಗುರುಗಳು ಧಾರ್ಮಿಕ ರಂಗದಲ್ಲಿ ನಡೆಯುತ್ತಿರುವ ದಲ್ಲಾಳಿತನವನ್ನು ತಪ್ಪಿಸುವತ್ತ ದಿಟ್ಟ ಹೆಜ್ಜೆಯನ್ನು ಇಟ್ಟಿದ್ದಾರೆ.

## ಅಥ ಶ್ರೀಪೀಠೇ ....... :

ಶ್ರೀಪೀಠದಲ್ಲಿನ ತಮ್ಮ ವಾಸ್ತವ್ಯದ ಅವಧಿಯನ್ನು ವಿಸ್ತರಿಸಿರುವ ಜಗದ್ಗುರುಗಳು ಪ್ರತಿ ಪೌರ್ಣಿಮೆಯಂದು ಎಲ್ಲಿದ್ದರೂ ಶ್ರೀಪೀಠಕ್ಕೆ ಆಗಮಿಸಿ 'ಗುರುಪೀಠ ಯಾತ್ರೆ'ಗೆ ಬಂದ ಜನಗಳಿಗೆ ದರ್ಶನವನ್ನೀಯುತ್ತಾರೆ. ಸನ್ನಿಧಿಯವರ ಪ್ರತಿ ಶ್ರಾವಣಮಾಸದ ಪೂಜಾನುಷ್ಠಾನವು ಶ್ರೀಪೀಠದಲ್ಲಿಯೇ ನಡೆಯುತ್ತಿರುವುದೊಂದು ವೈಶಿಷ್ಟ್ಯ. ಸನ್ನಿಧಿ–ಯವರಿಂದಾಗಿ ಶ್ರೀಪೀಠಕ್ಕೆ ಬರುವ ಭಕ್ತಾದಿಗಳ ಸಂಖ್ಯೆ ಈ ಒಂದು ಒಂದೂವರೆ

ವರ್ಷದಲ್ಲಿ ಗಣನೀಯವಾಗಿ ಬೆಳೆದಿದೆ. ಅದಲ್ಲದೆ ಅನೇಕ ಗಣ್ಯ-ಮಾನ್ಯರು, ಮಂತ್ರಿ-ಮಹೋದಯರು ಶ್ರೀಪೀಠವನ್ನು ಸಂದರ್ಶಿಸಿ ಹೋಗಿದ್ದಾರೆ. ಕರ್ನಾಟಕ ರಾಜ್ಯದ ಸದ್ಯದ ಮುಖ್ಯಮಂತ್ರಿಗಳಾದ ಮಾನ್ಯ ಶ್ರೀ ವೀರಪ್ಪ ಮೊಯ್ಲಿಯವರು ಶ್ರೀಪೀಠಕ್ಕೆ ಭೆಟ್ಟಿಕೊಟ್ಟು ಸನ್ನಿಧಿಯವರ ಜೊತೆ ಆಪ್ತಾಲೋಚನೆ ಮಾಡಿ ಅವರ ಮಾರ್ಗದರ್ಶನ ಹಾಗೂ ದರ್ಶನಾಶೀರ್ವಾದಗಳನ್ನು ಪಡೆದುಕೊಂಡಿರುವುದು ಗಮನಾರ್ಹ. ಕರ್ನಾಟಕದ ಮುಖ್ಯಮಂತ್ರಿಗಳೊಬ್ಬರು ಶ್ರೀಪೀಠಕ್ಕೆ ಅಧಿಕೃತವಾಗಿ ಆಗಮಿಸಿ ಪೀಠಾಚಾರ್ಯರ ಜೊತೆ ವಿಚಾರ-ವಿನಿಮಯ ಮಾಡಿರುವುದು ಇದೇ ಮೊದಲ ಬಾರಿ ಎಂದು ಶ್ರೀಪೀಠದ ಇತಿಹಾಸವು ಕೈ ಎತ್ತಿ ಹೇಳುತ್ತದೆ.

## ಅಲ್ಲಿಲ್ಲಿ ದಸರಾ ದರ್ಬಾರ್ :

ಧರ್ಮ-ಪ್ರಚಾರ ಮತ್ತು ಪ್ರಸಾರದ ಯೋಜನೆಯ ಅಡಿಯಲ್ಲಿ ಸನ್ನಿಧಿಯವರು ಅತ್ಯಂತ ಚುರುಕಾಗಿ ಕೆಲಸ ಮಾಡುತ್ತಲಿದ್ದಾರೆ. ಈಗಾಗಲೇ ಅವರು ಅಲ್ಲಲ್ಲಿ ಧರ್ಮ ಜಾಗೃತಿ ಸಭೆಗಳನ್ನು ಏರ್ಪಡಿಸಿ ಆಯಾ ಭಾಗಗಳ ಗಣ್ಯರನ್ನು, ಖ್ಯಾತರನ್ನು, ಕಲಾವಿದರನ್ನು ಮತ್ತು ಕಾರ್ಯಕರ್ತರನ್ನು ಶ್ರೀಪೀಠದಿಂದ ಸತ್ಕರಿಸಿ ಆಶೀರ್ವದಿಸಿದ್ದಾರೆ. ಅವರು ತಮ್ಮ ಪ್ರಪ್ರಥಮ ದಸರಾ ದರ್ಬಾರವನ್ನು ಉತ್ತರ ಕರ್ನಾಟಕದ ವಿಜಾಪೂರ ಜಿಲ್ಲೆಯ ನಿಡಗುಂದಿಯಲ್ಲಿ ನಡೆಯಿಸಿ ಆ ಭಾಗದ ಜನರನ್ನೆಲ್ಲ ಜಾಗೃತರನ್ನಾಗಿಸಿದ್ದಾರೆ. ಅವರ ಎರಡನೆಯ ದಸರಾ ದರ್ಬಾರವು ತುಮಕೂರಲ್ಲಿ ನಡೆಯುತ್ತಲಿದ್ದು ಜನ-ಮನವನ್ನು ಸಂತೋಷಿಸುತ್ತಲಿದೆ.

## ಇದಮಿತ್ಥಮ್ :

ಪರಮಪೂಜ್ಯ ಜಗದ್ಗುರುಗಳು ಈ ಒಂದು ಒಂದೂವರೆ ವರುಷದ ಅವಧಿಯಲ್ಲಿ ಆಡಿದ್ದಕ್ಕಿಂತಲೂ ಹೆಚ್ಚು ಮಾಡಿ ತೋರಿಸಿದ್ದಾರೆ. ಅವರು ತಮ್ಮ ಕರ್ತೃತ್ವ ಶಕ್ತಿಯನ್ನು ಚೆನ್ನಾಗಿ ಮಾತನಾಡಿಸಿದ್ದಾರೆ. ಅವರು ಯೋಜಿಸಿದ ಯೋಜನೆಯ ಪಟ್ಟಿಗಿಂತ ಅವರು ಸಾಧಿಸಿದ ಸಾಧನೆಯ ಪಟ್ಟಿಯೇ ದೊಡ್ಡದಾಗಿದೆ. ಅವರು ಮಾಡುವುದಕ್ಕಾಗಿಯೇ ಮಾತನಾಡುತ್ತಾರೆ ಎಂಬ ಭಾವನೆ ಜನರಲ್ಲಿ ಗಟ್ಟಿಯಾಗಿ ಬೇರೂರಿದೆ. ಸನ್ನಿಧಿಯವರು ಹತ್ತರ ಜೊತೆಗಿನ ಹನ್ನೊಂದಲ್ಲ ; ಅವರು ಇನ್ನೊಂದು ಮತ್ತು ಬೇರೊಂದೇ ಆಗಿದ್ದಾರೆ. ಅಂತಲೇ ೨೧ ನೇ ಅಖಿಲ ಭಾರತ ವೀರಶೈವ ಮಹಾಸಭೆಯಲ್ಲಿ ಅವರಿತ್ತ ಆಶೀರ್ವಚನ ಮತ್ತು ನುಡಿ-ಗುಡುಗು ಜನರಿಗೆ ಆಶ್ಚರ್ಯ ಮತ್ತು ರೋಮಾಂಚನವನ್ನು ಉಂಟು ಮಾಡಿತು. ಸದ್ಯ ಬೆಂಗಳೂರಿನಲ್ಲಿ ಪಂಚಪೀಠಾಧೀಶ್ವರರಿಂದ ಸಂಸ್ಥಾಪಿಸಲ್ಪಟ್ಟ 'ಮಾನವ ಧರ್ಮಸಂಸ್ಥೆ'ಯ ಅಧ್ಯಕ್ಷರಾಗಿರುವ ಜಗದ್ಗುರುಗಳು ಆ ಸಂಸ್ಥೆಯ ಕ್ರಿಯಾ-ಕಲಾಪಗಳನ್ನು ಮತ್ತು ಚಟುವಟಿಕೆಗಳನ್ನು ಚುರುಕುಗೊಳಿಸಿದ್ದಾರೆ. ಪರಮಪೂಜ್ಯರ

ಬಳಿ 'ಅಸಾಧ್ಯ' ಮತ್ತು 'ಆಗದು' ಎಂಬ ಮಾತುಗಳಿಗೆ ಬರಲು 'ಸಾಧ್ಯ'ವಾಗುತ್ತಲೇ ಇಲ್ಲ. ಸನ್ನಿಧಿಯವರೊಂದು ಯೋಜನೆಯ ಅಕ್ಷಯ ಪಾತ್ರೆ. ಯೋಜಿಸಿದ ಯೋಜನೆಗಳು ಆಕಾರ ತಳೆಯುತ್ತಲೇ ಮತ್ತೆ ಹೊಸ ಯೋಜನೆಗಳು ಅವರಲ್ಲಿ ಹುಟ್ಟಿಕೊಳ್ಳುತ್ತವೆ. ತೀರ್ಥಯಾತ್ರೆ ಮತ್ತು ಕ್ಷೇತ್ರಯಾತ್ರೆಗಳು ಜಾರಿಯಲ್ಲಿರುವಂತೆ 'ಗುರುಪೀಠ ಯಾತ್ರೆ'ಯನ್ನು ಜಾರಿಯಲ್ಲಿ ತರಬೇಕು ಎಂಬ ಯೋಚನೆಯ ಪರಮಪೂಜ್ಯರು ತಮ್ಮ ಪ್ರತಿಯೊಂದು ಸಭೆ-ಸಮಾರಂಭಗಳಲ್ಲಿ ಭಕ್ತರನ್ನು ಶ್ರೀಪೀಠಕ್ಕೆ ಬರಲು ಆಹ್ವಾನಿಸುತ್ತಾರೆ. ಜಗದ್ಗುರುಗಳದು ಸರ್ವಾಂಗ ಸುಂದರ ವ್ಯಕ್ತಿತ್ವ. ಅವರ ವ್ಯಕ್ತಿತ್ವದಿಂದ ವೀರಶೈವ ಜನ-ಜನಾಂಗವು ಪುಳಕಿತವಾಗಿದೆ. ಪರಮಪೂಜ್ಯ ಜಗದ್ಗುರುಗಳು ತಮ್ಮ ಸಶಕ್ತ ವ್ಯಕ್ತಿತ್ವದಿಂದ ಶ್ರೀಮದ್ ರಂಭಾಪುರೀ ವೀರಪೀಠದ 'ಕೀರ್ತಿ-ರೆಕ್ಕೆ'ಗಳು ಮತ್ತೆ ಮತ್ತು ಮತ್ತೊಮ್ಮೆ ತಮ್ಮನ್ನು ವಿಸ್ತರಿಸಿಕೊಂಡು ಜನರ 'ಭಾವ-ಬಾಂದಳ'ದಲ್ಲಿ ಆನಂದದಿಂದ ವಿಹರಿಸುವಂತೆ ಮಾಡಿದ್ದಾರೆ ಎಂದು ನಾವು ಹೇಳಿದರೆ ನಮ್ಮ ವೀರಶೈವ ಬಾಂಧವರು ಮತ್ತು ಕನ್ನಡ ರಾಜರಾಜೇಶ್ವರಿಯ ಮಕ್ಕಳು ಒಮ್ಮತದಿಂದ ಸಮ್ಮತಿಸಿ ಸಂತೋಷಿಸುತ್ತಾರೆ ಎಂದು ನಾವು ಭಾವಿಸಿಕೊಂಡಿದ್ದೇವೆ.

|| ಓಂ ||

# ಶ್ರೀಮದ್ ಉಜ್ಜಯಿನಿ ಸದ್ಧರ್ಮ ಸಿಂಹಾಸನಾಧೀಶ್ವರ ಪರಮಪೂಜ್ಯ ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು ಮರುಳಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳು

## ಹಂಪೆಯ ಗುಡಿಗಳನ್ನು ಹೊರಗಿನಿಂದ ನೋಡಬೇಕು ; ಉಜ್ಜಯಿನಿ ಪೀಠವನ್ನು ಒಳಗಿನಿಂದ ನೋಡಬೇಕು :

'ಹಂಪೆಯ ಗುಡಿಗಳನ್ನು ಹೊರಗಿನಿಂದ ನೋಡಬೇಕು; ಉಜ್ಜಯಿನಿಯ ಮಠ (ಪೀಠ)ವನ್ನು ಒಳಗೆ ನಿಂತು ನೋಡಬೇಕು' ಎಂಬೊಂದು ಗಾದೆಯ ಮಾತೇ ಇದೆ. ಉಜ್ಜಯಿನಿ ಶ್ರೀಪೀಠದ ಆಂತರಿಕ ಸೌಂದರ್ಯಕ್ಕೆ ಈ ಮಾತು ಬಲು ಒಪ್ಪವಾಗಿ ಒಪ್ಪುತ್ತದೆ. ಶ್ರೀಪೀಠದ ಅಂತರಂಗದ ಸೌಂದರ್ಯವನ್ನು ಮತ್ತು ಸೊಬಗನ್ನು ಸವಿಯಲು ಒಮ್ಮೆಯಾದರೂ ಶ್ರೀಪೀಠವನ್ನು ಸಂದರ್ಶಿಸಲೇಬೇಕು. ಇತಿಹಾಸ ಪ್ರಸಿದ್ಧವಾದ ಹಂಪೆಯ ಬಹಿರಂಗ ಮತ್ತೆ ಮತ್ತೆ ನೋಡಿಸಿಕೊಳ್ಳುವಂತಿದ್ದರೆ ಉಜ್ಜಯಿನಿ ಶ್ರೀಪೀಠದ ಅಂತರಂಗ ಮತ್ತೆ ಮತ್ತೆ ಅನುಭವಿಸುವಂತಿದೆ. ಶ್ರೀಪೀಠದಲ್ಲಿ ಕಲೆ ಜೀವತಳೆದು ನಿಂತಿದೆ. 'ಕಲಾ ಸರಸ್ವತಿ'ಯು ಇಲ್ಲಿ ತನ್ನನ್ನೇ ತಾನು ಸ್ವಸಂತೋಷದಿಂದ ಸಾಕ್ಷಾತ್ಕರಿಸಿ ನಿಂತುಕೊಂಡಿದ್ದಾಳೆ. ಶ್ರೀಪೀಠದಲ್ಲಿನ ಗುಡಿ–ಗೋಪುರಗಳಲ್ಲಿನ ಕೆತ್ತನೆಯ ಕೆಲಸ ಮೈ ಜುಮ್ಮೆನ್ನಿಸುವಂತಿದೆ. ಮಂದಿರದ ಗೋಪುರಾದಿಗಳ ಒಳಾಂಗಣವನ್ನು ನೋಡಬೇಕು; ಕಣ್ಣುಗಳು ದಿಗ್ಭ್ರಮೆಗೆ ಒಳಗಾಗುತ್ತವೆ. ಮನಸ್ಸು ಹುಚ್ಚೆದ್ದು ಕುಣಿಯತೊಡಗುತ್ತದೆ. ಹೃದಯವು ಪ್ರಫುಲ್ಲವಾಗಿ ಮತ್ತು ಪ್ರಸನ್ನವಾಗಿ ಅರಳಿನಿಂತು ಕೊಳ್ಳುತ್ತದೆ. ಭಾವಗಳು ಮೂಕವಿಸ್ಮಿತವಾಗುತ್ತವೆ. 'ಕಲಾ ತಪಸ್ಸು' ತನ್ನ ಸಾಧನೆ–ಸಿದ್ಧಿಗಳ ಕೊನೆಯ ಹಂತವನ್ನು ತಲುಪಿ ನಿಂತುಕೊಂಡಿದೆ. ಶಿಲ್ಪಿಗಳು ಆ ಕಲ್ಲುಗಳನ್ನು ಕೆತ್ತುವಾಗ ಕಲ್ಲುಗಳ ಹೃದಯದ ಜೊತೆ ಸಮರಸವಾಗಿದ್ದಾರೆ. ಅಂತಲೇ 'ಕಲ್ಲು' ಅವರ ಮುಂದೆ ಕಲ್ಲಾಗಿ ನಿಂತುಕೊಳ್ಳದೆ ಬೆಣ್ಣೆಯಾಗಿ ನಿಂತುಕೊಂಡಿದೆ. ಆದ್ದರಿಂದಲೇ ಅವರಿಗೆ ಕಲ್ಲನ್ನು 'ಬೆಣ್ಣೆ'ಯನ್ನು ಕೊರೆದಂತೆ ಕೊರೆಯಲು ಸಾಧ್ಯವಾಗಿದೆ. ಎಷ್ಟೊಂದು ಸೂಕ್ಷ್ಮ ಕೆತ್ತನೆ ! ಎಷ್ಟೊಂದು ನಯ–ವಿನಯಗಳು ಆ ಕಲ್ಲಲ್ಲಿ !! ಮುಖ್ಯ ಮಂದಿರದ ಗರ್ಭಗೃಹದ ಮುಂದಿರುವ ಮೇಲ್ಚಾವಣಿಯಲ್ಲಿ ಅರಳಿ ಅರಳಿ ನಿಂತುಕೊಂಡಿರುವ ಸಹಸ್ರ ದಳದ 'ಶಿಲಾ ಕಮಲ' ಯಾರನ್ನು ತಾನೆ ಮಂತ್ರಮುಗ್ಧರನ್ನಾಗಿಸುವುದಿಲ್ಲ? ಸಹಸ್ರ ದಳದ ಆ ಕಲ್ಲಿನ ಕಮಲದ ಪ್ರತಿಯೊಂದು ದಳವು ಈಗಲೋ ಆಗಲೋ ಕಳಚಿಕೊಂಡು (ಉದುರಿಕೊಂಡು) ಕೆಳಗೆ ಬೀಳುವಂತಿದೆ; ಆದರೆ ಬೀಳುವುದಿಲ್ಲ. ಇದು ಸತ್ಯ. ಆ ಮಹಾಶಿಲ್ಪಿ ಆ ಕಲ್ಲಿನ ಕಮಲದಲ್ಲಿ ಅಷ್ಟೊಂದು ನೈಜತೆಯನ್ನು ತುಂಬಿದ್ದಾನೆ.

ಗರ್ಭಗೃಹದ ಮುಂದಿನ ಮೇಲ್ಛಾವಣಿಗೆ ಅಂಟಿಕೊಂಡ ಆ ಒಂದು ಕಮಲವನ್ನು ನೋಡಿದರೆ ಸಾಕು, ಮೇಲೆ ಹೇಳಿದ ಆ ಗಾದೆಯ ಮಾತು ಸತ್ಯವೆಂದೆನಿಸುತ್ತದೆ.

## ಕಲೆಯ ಕಾಲ್ಗೆಜ್ಜೆಯ ಕುಣಿತ :

ಶ್ರೀಪೀಠದ ಒಳಾಂಗಣದಲ್ಲಿ ಎತ್ತ ದೃಷ್ಟಿ ಹರಿಸಿದರೂ ಅಲ್ಲಿ ಕಲೆಯು ಕಾಲ್ಗೆಜ್ಜೆಗಳನ್ನು ಕಟ್ಟಿಕೊಂಡು ನವಿರಾಗಿ ನವಿಲಿನಂತೆ ಕುಣಿದಂತೆ ಭಾಸವಾಗುತ್ತದೆ. ಶ್ರೀಪೀಠದ ಒಳಗೆ ಪ್ರವೇಶಿಸಿದರೆ ಸಾಕು; ಅಲ್ಲಿನ ಶಿಲ್ಪವೈಭವವು ನಮ್ಮನ್ನು ಬಂಧಿಯನ್ನಾಗಿ ನಿಲ್ಲಿಸುತ್ತದೆ. ಒಳಗೆ ಹೆಜ್ಜೆ ಇಟ್ಟವರಿಗೆ ಮತ್ತೆ ಹೊರಗೆ ಹೆಜ್ಜೆ ಇಡಲು ಮನಸ್ಸೇ ಆಗುವುದಿಲ್ಲ. ವಿಶಾಲ ಪ್ರಾಂಗಣದ ಕೇಂದ್ರಬಿಂದುವಿನಲ್ಲಿ ನಿಂತುಕೊಂಡಿರುವ ಮುಖ್ಯಮಂದಿರ, ಅದರ ಗರ್ಭಗೃಹ, ಅದರೊಳಗಿನ ಕೆತ್ತನೆಯ ಕೆಲಸ, ಶಿಲಾಮಂಟಪಗಳಲ್ಲಿನ ಚಾಕುಚಕ್ಯತೆಯ ಶಿಲ್ಪವೈಭವ, ಅಲ್ಲಿನ ಕರಕುಶಲ ಕೆಲಸಗಾರಿಕೆ ಸೂಕ್ಷ್ಮಾತಿಸೂಕ್ಷ್ಮ ಕೆತ್ತನೆಯ ಕೆಲಸ–ಕಣ್ಣುಗಳು ರೆಪ್ಪೆ ಬಡಿಯುವುದಕ್ಕೆ ಕೂಡ ಕಡಿವಾಣವನ್ನು ಹಾಕಿ ಬಿಡುತ್ತವೆ. ವೀರಶೈವ ಪಂಚಪೀಠಗಳನ್ನು ಪ್ರತಿನಿಧಿಸುವ ಐದು ಮಂಟಪಗಳು ಹಾಗೂ ಅವುಗಳಲ್ಲಿನ ಆದಿ ಜಗದ್ಗುರು ಪಂಚಾಚಾರ್ಯರ ಶಿಲಾಮೂರ್ತಿಗಳು, ಮಂದಿರದ ಹಾಸುಗಲ್ಲು, ನೃತ್ಯಮಂಟಪ, ಕಂಬ, ಗೋಡೆಗಳು ಈ ಎಲ್ಲವುಗಳಲ್ಲಿ ಶಿಲ್ಪಿಗಳ ಪ್ರತಿಭೆಯು ಸಜೀವಗೊಂಡಿದೆ. 'ಕಲಾಜಗದ್ಗುರು' ಜಕ್ಕಣ ಮತ್ತೆ ಹಾಗೂ ಮತ್ತೊಮ್ಮೆ ತನ್ನ ಪ್ರತಿಭೆಯನ್ನು ಮಿಂಚಿಸಿದ್ದಾನೆ ; ತನ್ನ ಕಲಾದಕ್ಷತೆಯನ್ನು ಪ್ರದರ್ಶಿಸಿದ್ದಾನೆ.

## ಸ್ಥಿತಪ್ರಜ್ಞತ್ವ ಪ್ರಾಪ್ತಿ :

ಶ್ರೀಪೀಠದಲ್ಲಿನ ಆ ಆಳೆತ್ತರದ ಅಂಕಳ ಶಿಲಾನಂದಿಯ ಬಳಿಗೆ ಬಂದಾಗ ಕೈಗಳು ಮುಗಿದುಕೊಳ್ಳುತ್ತವೆ, ತಲೆಬಾಗುತ್ತದೆ. ಬಸವಣ್ಣ ಹೇಳಿದ 'ಬಾಗಿದ ತಲೆಯ ಮುಗಿದ ಕೈಯಾಗಿರಿಸು' ಎಂಬ ಆ ಮಾತು ನಮಗರಿಯದಂತೆಯೇ ಯಥಾವತ್ತಾಗಿ ಆಚರಣೆಗೆ ಬರುತ್ತದೆ. ಅಲ್ಲಿನ ದೇವಿ ಮಂದಿರ, ಆ ದೇವಿಯ ಮುಖದ ಮೇಲಿರುವ ದಿವ್ಯಕಳೆ, ದೇವಿಯ ಮೂರ್ತಿಯಲ್ಲಿನ ತೇಜಸ್ಸು ನಮ್ಮ ಅಂತರ್ಯವನ್ನು ಸಮ್ಮೋಹಿನಿಗೆ ಒಳಗುಮಾಡುತ್ತದೆ. ಒಂದೇ ಪೀಠದ ಮೇಲೆ ವಿರಾಜಮಾನವಾದ ಅಷ್ಟ ಲಿಂಗ ಬಾಣಗಳು, ಲಿಂಗೈಕ್ಯ ಜಗದ್ಗುರುಗಳ ಸಮಾಧಿ–ಮಂದಿರಗಳು, ಆ ಎತ್ತರವಾದ 'ತೈಲ ಅಭ್ಯಂಜನ ಸೇವಾ ಗೋಪುರ'ದ ಜಿಡ್ಡು ಜಿಡ್ಡಾದ ಹೊರ ಮೈ....ಪ್ರತಿಯೊಂದು ಕೂಡ ತಮ್ಮದೇ ಆದ ನೈಜ ಸೌಂದರ್ಯದಿಂದ ಶೋಭಿಸುತ್ತವೆ. ಇದು ಅಲ್ಲದೆ, ಶಿಲಾದ್ವಾರಗಳು, ಶಿಲಾಮುಖಮಂಟಪಗಳು, ಶಿಲಾತೋರಣಗಳು ಮನಕ್ಕೆ ಮುದವನ್ನೀಯುತ್ತವೆ. ಶ್ರೀಪೀಠದ ತಂಗಾಳಿ ಗೋಪುರ ಮಹಾದ್ವಾರವು ದರ್ಶಕ–

ಸಂದರ್ಶಕರಿಗೆ ಸುಖಾನುಭವವನ್ನು ಕೊಡುತ್ತದೆ. ಆ ಮಹಾದ್ವಾರದಲ್ಲಿ ನಿಂತುಕೊಂಡಾಗ ಅಲ್ಲಿ ತೂರಿ ತೂರಿ, ಸೂಸಿ ಸೂಸಿ ಬರುವ ತಂಗಾಳಿಯು ಮೈ–ಮನಗಳನ್ನು ಹಿತವಾಗಿ ಸ್ಪರ್ಶಿಸುತ್ತಿರುವಾಗ ನವಿರಾಗಿ ತೀಡುತ್ತಿರುವಾಗ ಎಂಥ ಚಂಚಲಪ್ರಜ್ಞನು ಕೂಡ ಕ್ಷಣ ಕ್ಷಣಾರ್ಧ ಕಾಲವಾದರೂ ಸ್ಥಿತಪ್ರಜ್ಞನಾಗಿ ನಿಂತುಕೊಳ್ಳುತ್ತಾನೆ, ತನ್ನನ್ನೇ ತಾನು ಮರೆತು ಬಿಡುತ್ತಾನೆ. ಶ್ರೀಪೀಠದ ಮುಖ್ಯ ಮಹಾದ್ವಾರವು ಅತ್ಯಂತ ಭವ್ಯವಾಗಿದ್ದು ಸುಂದರವಾದ ವರ್ಣರಂಜಿತ ಶಿಲಾಮೂರ್ತಿಗಳಿಂದ ಕೂಡಿಕೊಂಡಿದ್ದು ಕಣ್ಣುಗಳನ್ನು ಸೆಳೆದು ಸೆರೆಯಾಗಿಸಿ ಕಣ್ಮನಗಳನ್ನು ತಣಿಸುತ್ತದೆ.

## ಎರಡಭಿಪ್ರಾಯಕ್ಕವಕಾಶವಿಲ್ಲ :

ಶ್ರೀಪೀಠದ ಸದ್ಧರ್ಮ ಸಿಂಹಾಸನವು ಈ ವಿಶಾಲವಾದ ಪ್ರಾಂಗಣದ ಒಳಗಡೆಯೇ ಇದ್ದು ಅದು ಕೂಡ ತನ್ನ ಭವ್ಯ ಹಾಗೂ ಆಧುನಿಕ ಸೊಬಗಿನಿಂದ ಜನರನ್ನು ಆಕರ್ಷಿಸುತ್ತದೆ. ಶ್ರೀಮದ್ ಜಗದ್ಗುರು ನಿವಾಸ, ಶಿವಪೂಜಾ ಮಂದಿರ, ಬೃಹತ್ ಪಂಚಾಚಾರ್ಯ ಸಭಾ–ಮಂಟಪ, ನೂರು ಗೋವುಗಳಿಗೆ ಏಕಕಾಲದಲ್ಲಿಯೇ ರಕ್ಷಣೆ ಕೊಡುವಂಥ ವಿಶಾಲವಾದ ಗೋಶಾಲೆ... ಇವುಗಳೆಲ್ಲ ತಮ್ಮ ಪ್ರಾಚೀನತೆಯನ್ನು ಗಟ್ಟಿಯಾಗಿ ಉಳಿಸಿಕೊಂಡು ಬಂದಿರುವುದಷ್ಟೇ ಅಲ್ಲ, ಕೆಲಮಟ್ಟಿಗೆ ಆಧುನಿಕತೆಯ ಆಧುನಿಕ ಗಾಳಿಯನ್ನು ಕೂಡ ಸ್ವಾಗತಿಸಿವೆ. ಶ್ರೀಪೀಠದ ಒಳಾಂಗಣದ ವಿಶಾಲ ಪ್ರಾಂಗಣವೆಲ್ಲ ಹಾಸುಬಂಡೆಗಳಿಂದ ಹೊದಿಸಲ್ಪಟ್ಟಿದ್ದು 'ಇಲ್ಲಿ ಕೂಡ್ರಬೇಕು ; ಅಲ್ಲಿ ಕೂಡ್ರಬಾರದು' ಎಂಬ ದ್ವಂದ್ವಕ್ಕೆ ಭಕ್ತರ ಮನಸ್ಸು ಹಾಗೂ ಸಂದರ್ಶಕರ ಬುದ್ಧಿಗಳು ಒಳಗಾಗದಂತೆ ಮಾಡಿದೆ. ಅಲ್ಲಿ ಎಲ್ಲಿ ಕೂತರೂ ಚೆನ್ನ !! ಪರಮಪೂಜ್ಯ ಲಿಂಗೈಕ್ಯ ಜಗದ್ಗುರು ಶ್ರೀ ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರ ಸಮಾಧಿ ಮಂದಿರದ ಬಳಿ ಬಂದಾಗ ದೇಹವು 'ಭಕ್ತಿ ಕಂಪನ'ಕ್ಕೆ ಒಳಗಾಗಿ ಅಷ್ಟಾಂಗ ಸಹಿತವಾದ ಸಾಷ್ಟಾಂಗ ನಮಸ್ಕಾರ ಮಾಡಲು ದೇಹ ಹಾತೊರೆಯುತ್ತದೆ ಮತ್ತು ಮನಸ್ಸು ಹವಣಿಸುತ್ತದೆ. ಶ್ರೀಪೀಠದ ಸುತ್ತಮುತ್ತಲೂ ಇರುವ ಎತ್ತರವಾದ 'ಶಿಲಾ ಸೀಮಾ ಬಂಧ (ಕಲ್ಲು ಬೇಲಿಯು)'ವು ಉಜ್ಜಯಿನಿಯ ಊರ ಒಳಗಣ ಗಾಳಿಯು ಶ್ರೀಪೀಠದ ಒಳಗೆ ತೂರಿಬರದಂತೆ ನಿಯಂತ್ರಿಸಿ ತನ್ನ ತಹಬಂದುವಿನಲ್ಲಿ ಇರಿಸಿಕೊಂಡಿದೆ. ಆದ್ದರಿಂದಲೇ ಊರ ಮಧ್ಯದಲ್ಲಿದ್ದರೂ ಶ್ರೀಪೀಠಕ್ಕೆ ಊರಿನ ಗದ್ದಲ–ಗಲಾಟೆಗಳ ಸೋಂಕಿಲ್ಲ. ವಿಂಧ್ಯ ಪರ್ವತದಂತೆ ತಾನೇ ತಾನಾಗಿ ಆಜಾನುಬಾಹುವಾಗಿ ಬೆಳೆದು ನಿಂತುಕೊಂಡಿದೆ. ಶ್ರೀಪೀಠದಲ್ಲಿರುವ ಪ್ರತಿಯೊಂದು ಕಲ್ಲು ಕೂಡ ಶ್ರೀಪೀಠದ ಪ್ರಾಚೀನ ವೈಭವದ ಇತಿಹಾಸವನ್ನು ಅತ್ಯಂತ ಹೆಮ್ಮೆಯಿಂದ ಹೇಳುತ್ತಿರುವಂತಿದೆ. ಶ್ರೀಪೀಠವನ್ನು ಪ್ರವೇಶಿಸಿದರೆ 'ಸದ್ಧರ್ಮಪುರ'ವನ್ನೇ ಪ್ರವೇಶಿಸಿದ ಅನುಭವವು ನಮ್ಮದಾಗುವುದೆಂಬುವುದರಲ್ಲಿ ಎರಡಭಿಪ್ರಾಯಕ್ಕೆ ಅವಕಾಶವೇ ಇಲ್ಲ.

## ಭಲೇ ಬಳ್ಳಾರಿ ! :

ಕರ್ನಾಟಕ ರಾಜ್ಯದ ಬಳ್ಳಾರಿ ಜಿಲ್ಲೆ ಎರಡು ದೃಷ್ಟಿಗಳಿಂದ ಹೆಸರು ಮಾಡಿದೆ. ಈ ಜಿಲ್ಲೆಯಲ್ಲಿ ಭಕ್ತಿಯೂ ಹೆಚ್ಚು ; ಬಿಸಿಲೂ ಹೆಚ್ಚು. ಕರ್ನಾಟಕ ರಾಜ್ಯದ ಇತಿಹಾಸವನ್ನು ಶ್ರೀಮಂತಿಸುವಲ್ಲಿ ಬಳ್ಳಾರಿ ಜಿಲ್ಲೆ ಮಹತ್ತ್ವದ ಪಾತ್ರವನ್ನಾಡಿದೆ. ಭಾರತೀಯ ಇತಿಹಾಸದಲ್ಲೆಲ್ಲ ಅತ್ಯಂತ ವೈಭವದಿಂದ ಮೆರೆದ ವಿಜಯನಗರ ಸಾಮ್ರಾಜ್ಯ ಬಾಳಿ ಬೆಳಗಿದುದು ಈ ಜಿಲ್ಲೆಯ ಪುಣ್ಯದ ಮಣ್ಣಿನಲ್ಲಿ. ಹಂಪೆಯ ವಿರೂಪಾಕ್ಷನ ಕೃಪೆಗೆ ಪಾತ್ರವಾದ ಈ ಜಿಲ್ಲೆ ಅತ್ಯಂತ ಆಧುನಿಕ ಹಾಗೂ ಸುಸಜ್ಜಿತ ಹೊಸಪೇಟೆ ಆಣೆಕಟ್ಟಿನಿಂದಾಗಿ ನಾಡು ಹಾಗೂ ನಾಡಾಚೆ ಕೂಡ ಬಹುದೊಡ್ಡ ಹೆಸರನ್ನು ಮಾಡಿದೆ. ಹಂಪೆಯಂಥ ಇತಿಹಾಸ ವಿಖ್ಯಾತ ಪ್ರೇಕ್ಷಣೀಯ ಸ್ಥಳವು ಈ ಜಿಲ್ಲೆಯ ಗೌರವವನ್ನು ಹೆಚ್ಚಿಸಿದ್ದರೆ ಈ ಜಿಲ್ಲೆಯ ಗೌರವಕ್ಕೆ ಗರಿ ಮೂಡಿಸಿದ ಕೀರ್ತಿ ಕೂಡಲಗಿ ತಾಲ್ಲೂಕಿನ ಕೊಟ್ಟೂರು ಬಳಿ ಇರುವ ಉಜ್ಜಯಿನಿಯದು. ಈ ಅಗ್ರವೀಳ್ಯ ಉಜ್ಜಯಿನಿಗೆ ಸಲ್ಲುತ್ತಿರುವುದಕ್ಕೆ ಅಲ್ಲಿರುವ ಸದ್ಧರ್ಮ ಸಿಂಹಾಸನವೇ ಕಾರಣ. ವೀರ ಶೈವರ ಪಂಚ ಮಹಾಪೀಠಗಳಲ್ಲೊಂದಾದ ಶ್ರೀಪೀಠವು ಈ ಊರಿನಲ್ಲಿದೆ. ಆದ್ದರಿಂದಲೇ ಉಜ್ಜಯಿನಿಯು ಇತಿಹಾಸದ ಪುಟಗಳಲ್ಲಿ ತಲೆ ಎತ್ತಿಕೊಂಡು ನಿಂತಿದೆ.

## ಹೆಚ್ಚಿದ ಮಣ್ಣಿನ ಪುಣ್ಯ :

ಸದ್ಧರ್ಮ ಶ್ರೀಪೀಠವು ಕರ್ನಾಟಕ ಪ್ರಾಂತದಲ್ಲಿರುವ ವೀರಶೈವರ ಎರಡನೆಯ ಗುರುಪೀಠ ಮತ್ತು ಧರ್ಮಪೀಠ. ವೀರಶೈವರ ಮೊದಲ ಹಾಗೂ ಎರಡನೆಯ ಗುರುಪೀಠಗಳು ಅನುಕ್ರಮವಾಗಿ ಒಂದೇ ನಾಡಿನಲ್ಲಿರುವುದು ಇನ್ನೊಂದು ವಿಶೇಷ. ವೀರಶೈವರ ಐತಿಹಾಸಿಕ ಮತ್ತು ಧಾರ್ಮಿಕ ಜೀವನದಲ್ಲಿ ಉಜ್ಜಯಿನಿ ಸದ್ಧರ್ಮಪೀಠವು 'ಅಹಂ ಭೂಮಿಕೆ'ಯನ್ನು ನಿರ್ವಹಿಸಿದೆ. ಕನ್ನಡ ನಾಡಿನ ಹೃದಯ–ಸ್ಥಲದಲ್ಲಿರುವ ಈ ಶ್ರೀಪೀಠವು ಕನ್ನಡಿಗರ ಹೃದಯಕ್ಕೆ ಅತ್ಯಂತ ಹತ್ತಿರವಾಗಿದೆ. ಒಂದು ಸಾಮಾನ್ಯ ಹಳ್ಳಿಯಂತಿರಬೇಕಾಗಿದ್ದ ಉಜ್ಜಯಿನಿಯು ಸದ್ಧರ್ಮಪೀಠವಿರುವದರಿಂದ ಪುಣ್ಯಸ್ಥಲವಾಗಿ ಮತ್ತು ಸುಕ್ಷೇತ್ರವಾಗಿ ನಿಂತುಕೊಂಡಿದೆ. ಈ ಪೀಠದ ಪೀಠಾಚಾರ್ಯರು ಉಜ್ಜಯಿನಿಯ ಮಣ್ಣಿನ ಪುಣ್ಯವನ್ನು ಹಾಗೂ ಕನ್ನಡ ನಾಡಿಗರ ಪವಿತ್ರತೆಯನ್ನು ಹೆಚ್ಚಿಸಿದ್ದಾರೆ. ಉಜ್ಜಯಿನಿ ಶ್ರೀಪೀಠವು ಅತ್ಯಂತ ಶ್ರೀಮಂತ ಪೀಠ, ಸಂಪದ್ಭರಿತ ಪೀಠ. ಅದಕ್ಕೆ ಭೌತಿಕ, ಬೌದ್ಧಿಕ, ಭಾವನಾತ್ಮಕ ಹಾಗೂ ಆಧ್ಯಾತ್ಮಿಕ ಶ್ರೀಮಂತಿಕೆ ಉಂಟು. ಅಂತಲೇ ಸಂಪತ್ತೆಂದ ತಕ್ಷಣ ಉಜ್ಜಯಿನಿ ಶ್ರೀಪೀಠವೇ ಕಣ್ಣುಗಳ ಮುಂದೆ ಬಂದು ನಿಂತುಕೊಳ್ಳುತ್ತದೆ.

## ಧರ್ಮವೇ ಗೊತ್ತು-ಗುರಿ ; ಧರ್ಮವೇ ಗುರಿ-ಗಂತವ್ಯ :

ಜನತೆಯಿಂದ 'ಸದ್ಧರ್ಮ ಸಿಂಹಾಸನ'ವೆಂದು ಕರೆಯಲ್ಪಡುವ ಸದ್ಧರ್ಮ ಶ್ರೀಪೀಠವು ಭಾರತೀಯ ಹಾಗೂ ಕರ್ನಾಟಕ ರಾಜ್ಯದ ಇತಿಹಾಸದಲ್ಲಿ ಮಹತ್ತ್ವ-ಪೂರ್ಣ ಭೂಮಿಕೆಯನ್ನು ನಿರ್ವಹಿಸಿದ್ದು ಜನರ ಭಾವ-ಭಾವನೆಗಳ ಮೇಲೆ ಅದ್ಭುತ ಪವಾಡವನ್ನೇ ಮಾಡಿದೆ. ಅದು 'ಅಧರ್ಮಿಗಳನ್ನು ಧರ್ಮಿಗಳನ್ನಾಗಿಸಿದೆ' ಕುಕರ್ಮ ನಿಷ್ಠರನ್ನು ಸತ್ಕರ್ಮನಿಷ್ಠರನ್ನಾಗಿಸಿದೆ. ಪಣ್ಯಾಂಗರನ್ನು ಪುಣ್ಯಾಂಗರನ್ನಾಗಿಸಿದೆ. ದಡ್ಡರನ್ನು ದೊಡ್ಡವರನ್ನಾಗಿಸಿದೆ, ಭೀರುಗಳನ್ನು ಧೀರರನ್ನಾಗಿಸಿದೆ, ವೀರಶೈವ ಶ್ರೀ ಸಿದ್ಧಾಂತವನ್ನು ಮತ್ತು ತತ್ತ್ವಪ್ರಣಾಳಿಯನ್ನು ಜನ-ಮನದಲ್ಲಿ ಹಾಸುಹೊಕ್ಕಾಗಿಸಲು ನಿರಂತರ ಪರಿಶ್ರಮಿಸಿದೆ. ಧರ್ಮರಕ್ಷಣೆಗಾಗಿ ಅದು ಅಂಥಿಂಥವರನ್ನಲ್ಲ ಎಂಥೆಂಥ ಅತಿರಥ ಮಹಾರಥರನ್ನು ಕೂಡ ಎದುರು ಹಾಕಿಕೊಂಡು ಧರ್ಮಕ್ಕೆ ಜಯವನ್ನು ತಂದು ಕೊಟ್ಟಿದೆ. ಈ ಶ್ರೀಪೀಠದ ಪೀಠಾಚಾರ್ಯರಿಗೆ ಧರ್ಮವೇ ಜೀವನದ ಉಸಿರು; ಧರ್ಮವೇ ಅವರ ಗೊತ್ತು-ಗುರಿ, ಧರ್ಮವೇ ಅವರ ಗುರಿ-ಗಂತವ್ಯ; ಧರ್ಮವೇ ಅವರ ಬಾಳು-ಬೆಳಕು. ಧರ್ಮಕ್ಕಾಗಿ ಹಾಗೂ ಧರ್ಮ ಸಂಸ್ಥಾಪನೆಗಾಗಿ ಅವರು ತಮ್ಮನ್ನೇ ತಾವು ಸಮರ್ಪಿಸಿಕೊಂಡಿದ್ದಾರೆ. ಧರ್ಮಕ್ಕಾಗಿ ಎಂಥ ಮತ್ತು ಯಾವ ತ್ಯಾಗಕ್ಕೂ ಸದಾ ಸಿದ್ಧರಾಗಿ ನಿಂತುಕೊಂಡಿದ್ದಾರೆ. ಧರ್ಮ ಈ ಶ್ರೀಪೀಠದ ಮಂತ್ರ. ಆದ್ದರಿಂದಲೇ ಇದು ಸದ್ಧರ್ಮಪೀಠ ಮತ್ತು ಸದ್ಧರ್ಮ ಸಿಂಹಾಸನ.

## ಧರ್ಮ-ಕೈಂಕರ್ಯಕ್ಕೆ 'ಶ್ರೀಗಣೇಶ' :

ಪರಶಿವನ ವಾಮದೇವ ಮುಖಸಂಜಾತರಾದ ಜಗದ್ಗುರು ಮರುಳಾರಾಧ್ಯರು ಈ ಶ್ರೀಪೀಠದ ಪ್ರಪ್ರಥಮ ಆಚಾರ್ಯರು. ಶಿವನ ಆಣತಿಯಂತೆ ಭೂಲೋಕದಲ್ಲಿನ ಕ್ಷಿಪ್ರಾನದಿಯ ತೀರದಲ್ಲಿರುವ ವಟಕ್ಷೇತ್ರದ ಶ್ರೀ ಸಿದ್ಧೇಶ್ವರಲಿಂಗದಿಂದ ಇವರು ಪ್ರಾದುರ್ಭವಿಸಿದರು. ಕೃತಯುಗದಲ್ಲಿ ಇವರು ಶ್ರೀ ದ್ವ್ಯಕ್ಷರ ಶಿವಾಚಾರ್ಯರೆಂದು, ತ್ರೇತಾಯುಗದಲ್ಲಿ ಶ್ರೀ ದ್ವಿವಕ್ತ್ರ ಶಿವಾಚಾರ್ಯರೆಂದು, ದ್ವಾಪರಯುಗದಲ್ಲಿ ಶ್ರೀ ದಾರುಕ ಶಿವಾಚಾರ್ಯರೆಂದು ಮತ್ತು ಕಲಿಯುಗದಲ್ಲಿ ಶ್ರೀ ಜಗದ್ಗುರು ಮರುಳಾರಾಧ್ಯ ಶಿವಾಚಾರ್ಯರೆಂದು ಪ್ರಸಿದ್ಧರಾಗಿ ಲೋಕಕಲ್ಯಾಣ ಹಾಗೂ ಧರ್ಮೋದ್ಧಾರ ಕೈಂಕರ್ಯವನ್ನು ಕೈಕೊಂಡು ಜನ-ಮಾನಸದಲ್ಲಿ ಧರ್ಮಭಾವನೆಯನ್ನು ಬಿತ್ತಿ ಬೆಳೆದು ಹುಲುಸು ಹುಲುಸಾಗಿಸಿದರು. ಈ ಪೀಠದ ಪರಮಪೂಜ್ಯ ಜಗದ್ಗುರುಗಳು ಧರ್ಮ-ಸಂಸ್ಥಾಪನೆ, ಧರ್ಮಪ್ರಚಾರಗಳನ್ನು ತಮ್ಮ ಬಾಳಿನ ಪ್ರಮುಖ ಗುರಿಯನ್ನಾಗಿಸಿಕೊಳ್ಳುವ ಜೊತೆ ಜೊತೆಯಲ್ಲಿ ದಲಿತಾದರ ಮತ್ತು ದಲಿತೋದ್ಧಾರಕ್ಕೆ ಕೂಡ ಕರೆಕೊಟ್ಟರು. ಆ ದಿಶೆಯಲ್ಲಿ ಗಣನೀಯ ಹಾಗೂ ಗಮನೀಯ ಕಾರ್ಯಗಳನ್ನು ಮಾಡಿ ಯಶಸ್ವಿಯಾದರು.

ಯಾವುದನ್ನಾದರೂ ಕಟ್ಟುವುದು ಸುಲಭ ; ಆದರೆ ಅದನ್ನು ಕಾಪಾಡಿಕೊಂಡು ಹೋಗುವುದು ಅಷ್ಟೊಂದು ಸುಲಭದ ಮಾತಲ್ಲ. ಈ ಶ್ರೀಪೀಠದ ಪೀಠಾಚಾರ್ಯರು ಸದ್ಧರ್ಮವನ್ನು ಜನರ ಅಂತರಂಗದಲ್ಲಿ ಕಟ್ಟುವುದರ ಜೊತೆ ಜೊತೆಯಲ್ಲಿ ಅದನ್ನು ಕಾಪಾಡಿಕೊಂಡು ಹೋಗುವ ಮಹಾಮಣಿಹಕ್ಕೂ ಸಹ ಹೆಗಲುಕೊಟ್ಟಿದ್ದಾರೆ.

## ಭೋಗಾಂಗವನ್ನು ತ್ಯಾಗಾಂಗವನ್ನಾಗಿಸಿ :

ಈ ಶ್ರೀಪೀಠದ ಪರಮಪೂಜ್ಯ ಜಗದ್ಗುರುಗಳು ಕೈಯಲ್ಲಿ ಪಲಾಶ ದಂಡವನ್ನು, ತಾಮ್ರವರ್ಣದ ಕಮಂಡಲುವನ್ನು ಮತ್ತು ಕೆಂಪುವರ್ಣದ ಧ್ವಜವನ್ನು ಹಿಡಿದು ಸಂಚರಿಸುತ್ತಾರೆ. ಕೆಂಪು ವರ್ಣವು ತ್ಯಾಗದ ಪ್ರತೀಕವಾಗಿದೆ. ತ್ಯಾಗ ಇದು ಜೀವನದ ಪರಮ ತತ್ತ್ವ. ಮನುಷ್ಯ ಜೀವನದಲ್ಲಿ ಎಷ್ಟನ್ನೇ ಗಳಿಸಲಿ, ಏನನ್ನೇ ಗಳಿಸಲಿ ಕೊನೆ ಗೊಂದು ದಿನ ಅವನಿಷ್ಟಪಡಲಿ, ಪಡದಿರಲಿ, ಕಷ್ಟಪಟ್ಟರೂ ಸರಿಯೇ—ಆತ ಎಲ್ಲವನ್ನು ಬಿಟ್ಟುಹೋಗಲೇಬೇಕು. ತ್ಯಾಗ ನಮ್ಮ ಜೀವನದ ಜೊತೆ ಸಮರಸವಾಗಿ ನಿಂತುಕೊಂಡಿದೆ. ಈ ಸತ್ಯವನ್ನರಿತು ನಾವು 'ನಿರಹಂ' ಹಾಗೂ 'ನಿರ್ಲಿಪ್ತ' ಭಾವದಿಂದ ಬದುಕಬೇಕು ಎಂಬ ಈ ಪರಮ ಸತ್ಯವನ್ನು ಪ್ರತಿಪಾದಿಸುವ ಕೆಂಪು ವರ್ಣದ ಧ್ವಜವು ಈ ಪೀಠದ ಪೀಠಾಚಾರ್ಯರ ಕೈಯಲ್ಲಿ ಪರಿಶೋಭಿಸುತ್ತಿರುತ್ತದೆ. ಭೋಗಾಂಗವನ್ನು ತ್ಯಾಗಾಂಗ ವನ್ನಾಗಿಸಿಕೊಳ್ಳಲ್ಲಿಕ್ಕೆ ಸದ್ಧರ್ಮಪೀಠದ ಸದ್ಧರ್ಮ ಧ್ವಜವು ಕರೆಕೊಡುತ್ತದೆ. ಈ ಧ್ವಜವು ತ್ಯಾಗದ ತಳಹದಿಯ ಮೇಲೆ ನಿಂತುಕೊಂಡ ಈ ಪೀಠಾಚಾರ್ಯರ ತ್ಯಾಗಮಯ ವ್ಯಕ್ತಿತ್ವವನ್ನು ಪ್ರತಿನಿಧಿಸುತ್ತದೆ ಮತ್ತು ಸಾಕ್ಷಿಸುತ್ತದೆ.

## ಸದ್ಧರ್ಮಸಿಂಹಾಸನಾಧೀಶ್ವರರು :

ಈ ಪೀಠದ ಪೀಠಾಚಾರ್ಯರು ಪಂಚ ಮಹಾಭೂತಗಳಲ್ಲಿ ಒಂದಾದ 'ಜಲತತ್ತ್ವ'ದ ಅಧಿಪತಿಗಳು. ವೇದಾಗಮ ಉಪನಿಷತ್ತುಗಳ ಸಾರಸರ್ವಸ್ವವನ್ನು ಅಂಗವಿಸಿಕೊಂಡ ಇವರು ಯಜುರ್ವೇದದ ಪರಂಪರೆಗೆ ಸೇರಿದವರು. ಪಂಚಾಕ್ಷರ ಮಂತ್ರದಲ್ಲಿಯ 'ಮ'ಕಾರ ಇವರ ಬೀಜ ಮಂತ್ರ. ಈ ಪೀಠದ ಪೀಠಾಚಾರ್ಯರು ವೃಷ್ಟಿಸೂತ್ರದ ಅಧಿಪತಿಗಳಾಗಿದ್ದು ಉಜ್ಜಯಿನಿ ಸದ್ಧರ್ಮ ಸಿಂಹಾಸನದ ಭಕ್ತರೆಲ್ಲರೂ 'ವೃಷ್ಟಿ ಸೂತ್ರ'ಕ್ಕೆ ಒಳಪಡುತ್ತಾರೆ. ಅವರೆಲ್ಲ ತಮ್ಮದು ವೃಷ್ಟಿಸೂತ್ರವೆಂದು ಹೇಳಿಕೊಳ್ಳಬೇಕು. ನಂದಿಯು ಈ ಪೀಠದವರ ಗೋತ್ರಪುರುಷ. ಈ ಪೀಠಕ್ಕೆ ಸೇರಿದವರೆಲ್ಲ ನಂದಿಗೋತ್ರಜರಾಗಿದ್ದು ಅವರೆಲ್ಲ ತಾವು ನಂದಿಗೋತ್ರಜರೆಂದು ಹೇಳಿಕೊಳ್ಳಬೇಕು.. ಶ್ರೀ ದಾರುಕ ಶಿವಾಚಾರ್ಯರನ್ನು ಗಣಾಧೀಶ್ವರರನ್ನಾಗಿ ಪಡೆದ ಈ ಶ್ರೀಪೀಠಕ್ಕೆ ಸಂಬಂಧಪಟ್ಟವರೆಲ್ಲ ತಾವು ದಾರುಕ ಶಾಖೆಗೆ ಸೇರಿದವರೆಂದು ಹೇಳಿಕೊಳ್ಳಬೇಕು. ಈ

ಸದ್ಧರ್ಮ ಪೀಠವನ್ನು ಆರೋಹಣ ಮಾಡಿದವರು 'ಸದ್ಧರ್ಮ ಸಿಂಹಾಸನಾಧೀಶ್ವರ' ರೆಂದು ಕರೆಯಲ್ಪಡುತ್ತಾರೆ.

## ಅ, ಬ, ಕ ...... ದಿಂದ ಕ್ಷ, ಜ್ಞ ದ ವರೆಗೆ :

ಸದ್ಧರ್ಮಪೀಠದ ತೂಕವನ್ನು ಹೆಚ್ಚಿಸಿದ ಕೀರ್ತಿ ಈ ಪೀಠದ ಪರಮಪೂಜ್ಯ ಪೀಠಾಚಾರ್ಯರದು. ಶ್ರೀಪೀಠದ ಇತಿಹಾಸವು ಗೌರವದಿಂದ ತಲೆ ಎತ್ತಿ ನಿಲ್ಲುವಂತೆ ಮಾಡಿದ ಶ್ರೇಯಸ್ಸು ಶ್ರೀಪೀಠದ ಗುರುಪರಂಪರೆಗೆ ಸಲ್ಲಬೇಕು. ಶ್ರೀಪೀಠದ ಪರಮಪೂಜ್ಯ ಪೀಠಾಚಾರ್ಯರು ತಮ್ಮಲ್ಲಿನ 'ಅ, ಬ, ಕ ...... ದಿಂದ ಮೊದಲು ಮಾಡಿಕೊಂಡು ಕ್ಷ, ಜ್ಞ.....' ದ ವರೆಗಿನ ಎಲ್ಲವನ್ನೂ ವೀರಶೈವ ಜನತೆಯ ಹಿತಕ್ಕಾಗಿ, ಸಮಾಜದ ಕಲ್ಯಾಣಕ್ಕಾಗಿ ಬಳಸಿದರು ಮತ್ತು ದುಡಿಸಿದರು. ಧರ್ಮವನ್ನು ಕೇವಲ ಪ್ರದರ್ಶನ ಹಾಗೂ ಪ್ರಚಾರದ ವಿಷಯ–ವಸ್ತುವನ್ನಾಗಿಸದೆ ಅದನ್ನು ಜನರ 'ಜೀವವಾಹಿನಿ'ಯಲ್ಲಿ ಸ್ಥಿರವಾಗಿ ನಿಲ್ಲಿಸಿದರು. ವಿಚಾರ ಧರ್ಮದ ಉಸಿರಾದರೆ ಆಚಾರ ಧರ್ಮದ ದೇಹ ವಿದ್ದಂತೆ. ಈ ಆಚಾರ–ವಿಚಾರಗಳ ಸುಮಧುರ ಸಂಯೋಗ ಮತ್ತು ಹಾರ್ದಿಕ ಸ್ಪಂದನವಾದಾಗಲೇ ಜಗತ್ತು, ಜನ ಮತ್ತು ಬದುಕು ಎಲ್ಲವೂ ಸತ್ಯ ಶಿವ ಸುಂದರವಾಗಿ ನಿಂತುಕೊಳ್ಳುತ್ತದೆ. ಈ ವಿಷಯವನ್ನು ಪೀಠಾಚಾರ್ಯರು ಜನತೆಗೆ ಪ್ರಾಂಜಲ ಮನಸ್ಸಿನಿಂದ ತಿಳಿಯಪಡಿಸಿದರು. ಜನತೆಗೆ ಧರ್ಮದ ಮೊದಲ ತರಗತಿಯ ಮೊದಲ ಪಾಠವಾದ 'ಕಳಬೇಡ, ಕೊಲಬೇಡ, ಹುಸಿಯ ನುಡಿಯಲಿ ಬೇಡ......' ಎಂಬಿತ್ಯಾದಿ ಧರ್ಮಜೀವನದ 'ಅ, ಆ, ಇ, ಈ .......' ಅಕ್ಷರಮಾಲೆಯನ್ನು ಕಲಿಸಿದರು.

## ಸಾರ್ವತ್ರಿಕಕ್ಕಾಗಿ ವೈಯಕ್ತಿಕ ಬಲಿದಾನ :

ಶ್ರೀಪೀಠದ ಪೀಠಾಚಾರ್ಯರ ಐತಿಹಾಸಿಕವನ್ನು ಸಮಗ್ರವಾಗಿ ಅಧ್ಯಯನ ಮಾಡಿದಾಗ ಮೈ–ಮನಗಳು ಭಕ್ತಿಯ ರೋಮಾಂಚನಕ್ಕೆ ಒಳಗಾಗುತ್ತವೆ. ದ್ವಾಪರ ಯುಗದ ಆಚಾರ್ಯರಾದ ಜಗದ್ಗುರು ಶ್ರೀ ದಾರುಕ ಶಿವಾಚಾರ್ಯರು ನೈಮಿಷಾರಣ್ಯದಲ್ಲಿ ವಾಸಮಾಡಿಕೊಂಡಿರುತ್ತಿದ್ದ ಮಹಾತ್ಯಾಗಿ, 'ಕೀರ್ತಿಧ್ವಜ' ದಧೀಚಿ ಮಹರ್ಷಿಗೆ ಶಿವಾದ್ವೈತ ಸಿದ್ಧಾಂತವನ್ನು ಬೋಧಿಸಿ ಆತನನ್ನು, ಆತನ ಸಕಲ ಶಿಷ್ಯಂದಿರನ್ನು ಕೃತಕೃತ್ಯರನ್ನಾಗಿಸಿದರು. ದಧೀಚಿ ಸಾಮಾನ್ಯನಲ್ಲ. ಆತ ಅಸಾಮಾನ್ಯ !! ಸಾರ್ವತ್ರಿಕ ಸುಖ–ಸಂತೋಷಕ್ಕಾಗಿ ತನ್ನ ವೈಯಕ್ತಿಕವನ್ನೇ ಬಲಿಕೊಟ್ಟ ಮಹಾನುಭಾವನಾತ. ದೇವತೆಗಳು ಅಸುರರ ದಾಳಿಗೆ ಸಿಕ್ಕು ತತ್ತರಿಸಿ ದಧೀಚಿಯ ಬಳಿ ಬಂದು ಆಯುಧಗಳ ನಿರ್ಮಾಣಕ್ಕಾಗಿ ಆತನ ಬೆನ್ನುಮೂಳೆಯನ್ನು ಕೇಳಿದಾಗ ತನ್ನ ಬೆನ್ನುಮೂಳೆಯನ್ನೇ ದಾನವಾಗಿ ಕೊಟ್ಟು ತನ್ನನ್ನು ಬಲಿಯಾಗಿಸಿ ದೇವಲೋಕವನ್ನು ಬದುಕಿಸಿದ ಉಪಮಾತೀತ

ವ್ಯಕ್ತಿತ್ವ ಅವನದು. ಅಂಥ ದಧೀಚಿ ಮಹರ್ಷಿಗೆ ಶಿವಸಿದ್ಧಾಂತವನ್ನು ಬೋಧಿಸಿದ ಶ್ರೇಯಸ್ಸು ಸದ್ಧರ್ಮಪೀಠದ ಪೀಠಾಚಾರ್ಯರ 'ಕೀರ್ತಿ ಬತ್ತಳಿಕೆ'ಯನ್ನು ಸೇರಿದೆ.

**ಶ್ರೀಮದುಜ್ಜಯಿನಿ ಸದ್ಧರ್ಮ ಶ್ರೀಪೀಠದ ಐತಿಹಾಸಿಕ ಪುಟಗಳನ್ನು ಅವಲೋಕಿಸಿದಾಗ**

## ಅಸಾಮಾನ್ಯ ಪವಾಡವಿದು ! :

ಶ್ರೀ ಜಗದ್ಗುರು ಮರುಳಾರಾಧ್ಯರು ಅಂದು ಮಾಳವ ದೇಶವೆಂದು ಖ್ಯಾತವಾಗಿದ್ದ, ಇಂದು ಮಧ್ಯಪ್ರದೇಶವೆಂದು ಗುರುತಿಸಲ್ಪಡುವ ಪ್ರಾಂತದಲ್ಲಿರುವ 'ಅಘನಾಶಿನಿ'ಎಂದೆನಿಸಿದ ಕ್ಷಿಪ್ರಾನದಿಯ ದಂಡೆಯ ಮೇಲಿರುವ ಮಹಾಕಾಲ ಉಜ್ಜಯಿನಿಯ ವಟಕ್ಷೇತ್ರದ ಶ್ರೀ ಸಿದ್ಧೇಶ್ವರ ಲಿಂಗದಿಂದ ಪ್ರಾದುರ್ಭವಿಸಿದರು. ಅವರು ಅಲ್ಲಿಯೇ ಒಂದು ಸದ್ಧರ್ಮ ಪೀಠವನ್ನು ಸಂಸ್ಥಾಪಿಸಿ ಭಾರತದ ಆ ಭಾಗದಲ್ಲಿ ವೀರಶೈವ ತತ್ತ್ವ ಪ್ರಚಾರಕ್ಕಾಗಿ ಬಲು ಭದ್ರವಾದ ತಳಹದಿಯನ್ನು ಸಿದ್ಧಪಡಿಸಿದರು. ಉಜ್ಜಯಿನಿಯ ಅರಸು ಶ್ರೌತಪಾಲ ಮತ್ತು ಆತನ ಶ್ರೀಮತಿ ಭಾನುಮತಿ ಈ ಈರ್ವರು ರಾಜ–ದಂಪತಿಗಳು ಶ್ರೀ ಜಗದ್ಗುರು ಮರುಳಾರಾಧ್ಯರಿಂದ ಶಿವದೀಕ್ಷೆಯನ್ನು ಪಡೆದು ಘೋರ–ಘನಘೋರ ಯಜ್ಞಯಾಗಾದಿ ಗಳಿಗೆಲ್ಲ ತಿಲಾಂಜಲಿಯನ್ನಿತ್ತು ಸಾತ್ತ್ವಿಕ ಶಿವಪೂಜಾ ವಿಧಿ–ವಿಧಾನಗಳನ್ನು ರೂಢಿಸಿಕೊಂಡು ಶಿವಭಕ್ತರಾದರು ಮತ್ತು ವೀರಶೈವ ಸಿದ್ಧಾಂತವನ್ನು ಚೆನ್ನಾಗಿ ಅರ್ಥೈಯಿಸಿಕೊಂಡು ಜಗದ್ಗುರು ಮರುಳಾರಾಧ್ಯರ ಪ್ರೀತ್ಯಭಿಮಾನಗಳಿಗೆ ಪಾತ್ರರಾದರು. ಇದು ಜಗದ್ಗುರು ಮರುಳಾರಾಧ್ಯರು ಮಾನವ ಮನಸ್ಸುಗಳ ಮೇಲೆ ಮಾಡಿದ ಮೊಟ್ಟಮೊದಲ ಪವಾಡ.

## ಗುರುಪೀಠ ಯಾತ್ರೆ :

ಶ್ರೀ ಜಗದ್ಗುರು ಮರುಳಾರಾಧ್ಯರು ದೇಶಸಂಚಾರ ಮಾಡುತ್ತ, ಗಂಗಾ–ಯಮುನಾ ನದಿಗಳ ಮಧ್ಯದಲ್ಲಿರುವ ದಾರುಕವನಕ್ಕೆ ದಯಮಾಡಿಸಿ ಅಲ್ಲಿಯ ಋಷಿ–ಮುನಿಗಳಿಗೆಲ್ಲ ಶಿವಾದ್ವೈತ ಸಿದ್ಧಾಂತವನ್ನು ಬೋಧಿಸಿ ಅವರೆಲ್ಲ 'ಧನ್ಯೋಽಸ್ಮಿ' ಎಂಬ ಭಾವವನ್ನು ತಳೆಯುವಂತೆ ಮಾಡುತ್ತಾರೆ. ಮುಂದೆ ಕಾಶೀ ಕ್ಷೇತ್ರಕ್ಕೆ ದಯಮಾಡಿಸಿದ ಅವರು ಕಾಶಿಯಲ್ಲಿ ಜಗದ್ಗುರು ವಿಶ್ವಾರಾಧ್ಯರನ್ನು ಸಂದರ್ಶಿಸಿ ಮತ್ತು ಸಂಧಿಸಿ ಕಾಶಿಯಲ್ಲಿಯೇ ನಾಲ್ಕುನೂರು ವರ್ಷ ಯೋಗಸಮಾಧಿಸ್ಥರಾಗುತ್ತಾರೆ. ಅನಂತರ ಶ್ರೀಶೈಲ ಶ್ರೀಕ್ಷೇತ್ರಕ್ಕೆ ಭೆಟ್ಟಿಕೊಟ್ಟು ಅಲ್ಲಿನ ಜಗದ್ಗುರು ಪಂಡಿತಾರಾಧ್ಯರನ್ನು ಕಂಡು ಅವರ ಜೊತೆ ಧಾರ್ಮಿಕ ವಿಚಾರಗಳ ಆದಾನ–ಪ್ರದಾನಗಳನ್ನು ಮಾಡಿಕೊಂಡು ಮುಂದೆ ಕಾಶ್ಮೀರಕ್ಕೆ ದಯಮಾಡಿಸುತ್ತಾರೆ. ಕಾಶ್ಮೀರ ಪ್ರಾಂತದಲ್ಲಿ ಶಿವಭಕ್ತಿಯ ಪ್ರಾಬಲ್ಯವನ್ನು ಹೆಚ್ಚಿಸಿ ಮುಂದೆ ಅವರು ತಮ್ಮ ಐಹಿಕಯಾತ್ರೆಗೆ ಪೂರ್ಣವಿರಾಮಕೊಡುವ ಮೊದಲು ಕೇದಾರ ಸುಕ್ಷೇತ್ರಕ್ಕೆ ಆಗಮಿಸುತ್ತಾರೆ. ಅಲ್ಲಿ ಜಗದ್ಗುರು ಏಕೋರಾಮಾರಾಧ್ಯರನ್ನು

ಭೆಟ್ಟಿಮಾಡಿ ಅವರ ಜೊತೆ ಕೆಲಕಾಲ ಕಾಲಕಳೆಯುತ್ತಾರೆ.

ಆ ನಂತರ ಗೌರಿಕುಂಡದಲ್ಲಿ ಸ್ನಾನಮಾಡುತ್ತಿರುವಾಗ ದಿವ್ಯವಟು ಓರ್ವ ಕಾಣಿಸಿಕೊಳ್ಳಲಾಗಿ ಅವನು ಸಾಕ್ಷಾತ್ ನಂದೀಶ್ವರನೆಂದೇ ಗುರುತಿಸಿದ ಉಭಯ ಜಗದ್ಗುರುಗಳು ಆತನನ್ನು ಬಳಿ ಕರೆದು ಆಶೀರ್ವದಿಸಿ ಆತನಿಗೆ 'ಮುಕ್ತಿಮುನಿ' ಎಂದು ನಾಮಕರಣ ಮಾಡುತ್ತಾರೆ. ನಂತರ ಆ ವಟುವನ್ನು ಉಜ್ಜಯಿನಿ ಕ್ಷೇತ್ರಕ್ಕೆ ಕರೆತಂದು ಆತನಿಗೆ 'ಜಗದ್ಗುರು ಪಟ್ಟಾಭಿಷೇಕ' ಮಾಡಿ ಸದ್ಧರ್ಮ ಸಿಂಹಾಸನದ ಸಮಸ್ತ ಅಧಿಕಾರವನ್ನು ಆತನಿಗೆ ವಹಿಸಿಕೊಡುತ್ತಾರೆ.

## ಪೀಠಾಚಾರ್ಯರ ಅಹಂಭೂಮಿಕೆ :

ಶ್ರೀ ಜಗದ್ಗುರು ಮುಕ್ತಿಮುನಿಗಳು ಪಟ್ಟಾಧಿಕಾರ ಹೊಂದಿಯಾದ ಮೇಲೆ ಸುಮಾರು ಮುನ್ನೂರು ವರ್ಷಗಳವರೆಗೆ ವೀರಶೈವ ಮತವನ್ನು ಬಹುದೊಡ್ಡ ಪ್ರಮಾಣದಲ್ಲಿ ಪ್ರಚಾರಮಾಡುತ್ತಾರೆ. ಅವರ ನಂತರ ಸದ್ಧರ್ಮಪೀಠವನ್ನು ಅಲಂಕರಿಸಿದ ಶ್ರೀ ಜ. ಸಿದ್ಧಮುನಿಗಳು, ಶ್ರೀ ಜ. ಶಿವಮುನೀಂದ್ರ ಶಿವಾಚಾರ್ಯರು, ಶ್ರೀ ಜ. ಶಾಂತಮುನಿ ಶಿವಾಚಾರ್ಯರು ವೀರಶೈವ ಮತವನ್ನು ದೇಶದ ತುಂಬೆಲ್ಲ ಸಾಕಷ್ಟು ವ್ಯಾಪಕ ರೂಪದಲ್ಲಿ ಪ್ರಸಿದ್ಧಿಸುತ್ತಾರೆ. ಶ್ರೀಪೀಠ ಪರಂಪರೆಯಲ್ಲಿಯ ಶ್ರೀ ಜಗದ್ಗುರು ಭವಭೂತಿ ಮುನಿಗಳು ಮಹಾತಪಸ್ವಿಗಳು ಮತ್ತು ಘನ ವಿದ್ವಾಂಸರು. ಅವರು ಉಜ್ಜಯಿನಿ ಭೋಜರಾಜ ಕಾಳಿದಾಸಾದಿಗಳ ಗೌರವಕ್ಕೆ ಪಾತ್ರರಾಗಿದ್ದರು. ಆ ನಂತರ ಪೀಠವನ್ನು ಅಲಂಕರಿಸಿದ ಶ್ರೀ ಜ. ಇಮ್ಮಡಿ ಮುಕ್ತಿಮುನಿ ಶಿವಾಚಾರ್ಯರು, ಶ್ರೀ ಜ. ಇಮ್ಮಡಿ ಸಿದ್ಧಮುನಿ ಶಿವಾಚಾರ್ಯರು, ಶ್ರೀ ಜ. ಈಶಾನ್ಯಮುನಿ ಶಿವಾಚಾರ್ಯರು..... ಇವರೇ ಮೊದಲಾದವರು ಅನಂತ ವರ್ಷಗಳವರೆಗೆ ಪೀಠಾಸೀನರಾಗಿದ್ದು ವೀರಶೈವ ಧರ್ಮದ 'ಸ್ಥಿತಿಸ್ಥಾಪಕ' ಗುಣವನ್ನು ಕಾಪಾಡಿಕೊಂಡು ಬಂದರು.

## ಧರ್ಮಯುದ್ಧದ ವಿಜಯ :

ಶ್ರೀ ಜಗದ್ಗುರು ಶಂಭುಮುನಿ ಶಿವಾಚಾರ್ಯರು ಈ ಸದ್ಧರ್ಮಪೀಠ ಪರಂಪರೆಯ ಹದಿನೈದನೆಯ ಪೀಠಾಧಿಪತಿಗಳು. ಇವರ ಕಾಲದಲ್ಲಿ ಜೈನಧರ್ಮವು ಉಚ್ಛ್ರಾಯ ಸ್ಥಿತಿಗೆ ಏರಿ ನಿಂತುಕೊಂಡಿತ್ತು. ಜೈನಧರ್ಮದ ಅಂಧಾಭಿಮಾನಿಗಳ ಸಂಖ್ಯೆ ದಿನೇದಿನೇ ದೈತ್ಯರಂತೆ ಬೆಳೆದುನಿಂತುಕೊಂಡಿತ್ತು. ಪರಧರ್ಮ ಅಸಹಿಷ್ಣುವಾದ ಜೈನದೊರೆ ವೀರಸೇನ ವೀರಶೈವ ಧರ್ಮವನ್ನೇ ಆಮೂಲಾಗ್ರವಾಗಿ ನಾಶಮಾಡಲು ಶಪಥ ತೊಟ್ಟಿದ್ದ. ಪೂಜ್ಯರು ವೀರಶೈವ ಧರ್ಮದ ವಿರುದ್ಧ ಧ್ವನಿ ಎತ್ತಿದ, ಅನ್ಯಧರ್ಮ ಸಹಿಷ್ಣುವಲ್ಲದ ವೀರಸೇನನ ವಿರುದ್ಧ 'ಧರ್ಮಸೈನ್ಯ'ವನ್ನು ಕಟ್ಟಿ ಆತನನ್ನು ಯುದ್ಧಕ್ಕೆ

ಆಹ್ವಾನಿಸಿ 'ವೀರಶೈವ' ಧರ್ಮದ ಅಳಿವು ಉಳಿವುಗಳಿಗಾಗಿ ನಡೆದ ಆ ಧರ್ಮಯುದ್ಧದಲ್ಲಿ ವಿಜಯಿಗಳಾದರು. ಈ ಯುದ್ಧ, ಆಹ್ವಾನ, ಸೈನ್ಯ, ರಕ್ತಪಾತ..... ಇತ್ಯಾದಿಗಳನ್ನು ನೋಡಿ ಬೇಸತ್ತ ಪರಮಪೂಜ್ಯರ ಎತ್ತರವಾದ ಮಾನಸಿಕವು ಅರಣ್ಯವನ್ನು ಸೇರ ಬಯಸಿತು. ಅರಣ್ಯವೊಂದರಲ್ಲಿ ಪರ್ಣಕುಟೀರವೊಂದನ್ನು ಕಟ್ಟಿಕೊಂಡು ಸುಮಾರು ವರ್ಷಗಳವರೆಗೆ ಯೋಗ, ತಪಸ್ಸು, ಧರ್ಮಸೇವೆಗಳನ್ನು ಮಾಡಿದರು. ಮುಂದೆ ತಮ್ಮ ಉತ್ತರಾಧಿಕಾರವನ್ನು ತಮ್ಮ ಪ್ರಿಯಶಿಷ್ಯಂದಿರಾದ ಮರುಳಸಿದ್ಧರಿಗೆ ವರ್ಗಾಯಿಸಿ ತಾವು ಈ ಲೌಕಿಕ ದಿಗ್ವಿಜಯ–ಯಾತ್ರೆಗೆ ಪೂರ್ಣವಿರಾಮವನ್ನಿತ್ತರು.

## ಸೊಕ್ಕೇರಿದ ಸೊಕ್ಕಿನ ರಾಣಿ :

ಶ್ರೀ ಜ. ಮರುಳಸಿದ್ಧರು ತಮ್ಮ ಗುರುಗಳ ಲೌಕಿಕ ಜೀವನದ ಪರಿಸಮಾಪ್ತಿಯಾದ ನಂತರ ತಮ್ಮ ಆಂತರಿಕದ ಆದೇಶದ ಮೇರೆಗೆ ಉಜ್ಜಯಿನಿ ಪರಿಸರದಿಂದ ಹೊರಬಂದು ತಮ್ಮ ಶಿಷ್ಯಂದಿರ ಜೊತೆಯಲ್ಲಿ ದೇಶಸಂಚಾರ ಮಾಡುತ್ತ ಮತ್ತು ಭಕ್ತ ಮಾನಸದಲ್ಲಿ 'ಭಕ್ತಿಸಂಚಾರ' ಮಾಡಿಸುತ್ತ ಮಹಾರಾಷ್ಟ್ರದ ವಿವಿಧ ಪ್ರಾಂತಗಳಿಗೆ ಭೆಟ್ಟಿ ಕೊಟ್ಟರು. ಅನಂತರ ರಂಭಾಪುರಿ ಶಾಖಾಮಠವಾದ ಕೊಲ್ಲಾಪುರದ ಸಮೀಪವಿರುವ 'ಸಿದ್ಧಗಿರಿ'ಗೆ ಬರುತ್ತಾರೆ. ಅಲ್ಲಿ ಕೆಲಕಾಲದವರೆಗೆ ವಾಸವಾಗಿದ್ದ ರೇವಣಸಿದ್ಧರನ್ನು ಸಂದರ್ಶಿಸುತ್ತಾರೆ. ಅವರ ಜೊತೆಯಲ್ಲಿ ಕೆಲಕಾಲ ಕಳೆದ ಜಗದ್ಗುರು ಮರುಳಸಿದ್ಧರು ಕೊಲ್ಲಾಪುರದ ಸೊಕ್ಕೇರಿದ ಸೊಕ್ಕಿನ ರಾಣಿ ಮಾಯಾದೇವಿಯ ಗರ್ವಭಂಗ ಮಾಡಿ ಅವಳನ್ನು ಶಿವಭಕ್ತಳನ್ನಾಗಿಸುತ್ತಾರೆ. ಪರಮಪೂಜ್ಯರು ಕರಟಾಸುರನಿಗೆ ಮತ್ತು ಆತನ ಪರಿವಾರಕ್ಕೆ ಶಿವದೀಕ್ಷೆಯನ್ನಿತ್ತು ಆತನ ಕುಲಪರಂಪರೆಯನ್ನೇ ಉದ್ಧರಿಸುತ್ತಾರೆ. ಆ ಬಳಿಕ ಕರ್ನಾಟಕ ಪ್ರಾಂತಕ್ಕೆ ದಯಮಾಡಿಸಿದ ಪರಮಪೂಜ್ಯರು ಬಳ್ಳಾರಿ ಜಿಲ್ಲೆಯ ಕೂಡಲಗಿ ತಾಲ್ಲೂಕಿನ ಕೊಟ್ಟೂರು ಬಳಿ ಇರುವ (ಕೊಟ್ಟೂರಿಂದ ಹದಿನಾಲ್ಕು ಕಿಲೋ ಮೀಟರ ದೂರವಿರುವ) ಒಂದು ಸುಂದರ–ಸುರಮ್ಯ ಪ್ರದೇಶದಲ್ಲಿ 'ಪ್ರತಿ ಉಜ್ಜಯಿನಿ'ಯನ್ನೇ ಸೃಷ್ಟಿಸಿದರು. ಆ ಉಜ್ಜಯಿನಿಯಲ್ಲಿಯೇ ಸದ್ಧರ್ಮಪೀಠದ ಮೂಲ ಚೈತನ್ಯವನ್ನು ಮತ್ತೊಮ್ಮೆ ಪ್ರತಿಷ್ಠಾಪಿಸಿ ಕರ್ನಾಟಕದ ಪುಣ್ಯವನ್ನು ಹೆಚ್ಚಿಸಿದರು.

## ಮತ್ತೊಮ್ಮೆ ಬೆಳಗಿತು

ಸದ್ಧರ್ಮ ಸಿಂಹಾಸನವನ್ನು ಸ್ಥಾಪಿಸಿದ ಪರಮಪೂಜ್ಯರು ಅಲ್ಲೊಂದು ಸುಂದರವಾದ ಸುಸಜ್ಜಿತವಾದ ಭವ್ಯಮಠವನ್ನು ಕಟ್ಟಲು ಸಂಕಲ್ಪಿಸಿದರು. ಈ ಕಾರ್ಯಕ್ಕಾಗಿ ಅವರು ಓರುಗಲ್ಲಿಗೆ ಹೋಗಿ ಅಲ್ಲಿಯ ಕಾಕತೀಯ ರಾಜನಾದ ಗಣಪತಿ ಭೂಪಾಲನನ್ನು ಹಾಗೂ ಹೊಸಕಲ್ಯಾಣದ ದೊರೆ ಶ್ರೀ ಸೋಮೇಶ್ವರ ಭೂಪತಿಯನ್ನು ಸಂಪರ್ಕಿಸಿದಾಗ ಅವರು ಪರಮಪೂಜ್ಯರ ಸೇವಾ–ಕೈಂಕರ್ಯಕ್ಕೆ 'ನಾ ಮೊದಲು, ತಾ ಮೊದಲು'

ಎಂದು ಧಾವಿಸಿ ಮುಂದೆ ಬಂದರು. ಖ್ಯಾತಶಿಲ್ಪಿ ಜಕ್ಕಣಾಚಾರ್ಯ ಪೀಠಸೇವೆ ಮಾಡಲು ಅಣಿಯಾದ. ಅವರೆಲ್ಲರ ಸಹಾಯ–ಸಹಕಾರ–ಸಹಯೋಗಗಳಿಂದ ಅತ್ಯದ್ಭುತವಾದ ಅನುಪಮವಾದ ಕಲಾದೇವತೆಯೇ ಮೈತಳೆದಂತಿರುವ ಸದ್ಧರ್ಮ ಪೀಠವು ನಿರ್ಮಾಣಗೊಂಡಿತು. ವಿನೂತನವಾಗಿ ನಿರ್ಮಾಣಗೊಂಡ ಕರ್ನಾಟಕದ ಉಜ್ಜಯಿನಿ ಸದ್ಧರ್ಮ ಸಿಂಹಾಸನಕ್ಕೆ ಜಗದ್ಗುರು ಮರುಳಸಿದ್ಧರೇ ಪೀಠಾಧ್ಯಕ್ಷರಾಗಿ ಅಧಿಕಾರವನ್ನು ವಹಿಸಿಕೊಂಡರು.

ಶ್ರೀ ಜ. ರೇವಣಸಿದ್ಧರು, ಶ್ರೀ ಜ. ಪಂಡಿತಾರಾಧ್ಯರು ಈ ಪರಮ ಪವಿತ್ರ ಮಂಗಲ ಕಾರ್ಯಕ್ಕೆ ತಮ್ಮ ದಿವ್ಯಸಾನ್ನಿಧ್ಯವನ್ನಿತ್ತು ಮಂಗಲ ಕಾರ್ಯವನ್ನು ಅನುಗ್ರಹಿಸಿದರು. ಈ ಕಾರ್ಯಕ್ರಮಕ್ಕೆ ರಾಷ್ಟ್ರಕೂಟ ಮತ್ತು ಓರಂಗಲ್ಲ ಪುರಿಗಳ ದೊರೆಗಳು ಆಗಮಿಸಿ ಭಕ್ತಿಕಾಣಿಕೆಗಳನ್ನು ಸಲ್ಲಿಸಿದರು. ಭುವನೈಕಮಲ್ಲ ಶ್ರೀ ಸೋಮೇಶ್ವರನು ೧೨೦ ಕ್ಕೂ ಹೆಚ್ಚು ಗ್ರಾಮಗಳನ್ನು ಪರಮಪೂಜ್ಯರಿಗೆ ತನ್ನ ರಾಜ್ಯದಲ್ಲಿ ಉಂಬಳಿಯಾಗಿಕೊಟ್ಟನು. ಮುಂದೆ ಜಗದ್ಗುರು ಮರುಳಸಿದ್ಧರು ೧೭೦ ವರ್ಷಗಳವರೆಗೆ ಸದ್ಧರ್ಮ ಸಿಂಹಾಸನಾಧಿಪತಿಗಳಾಗಿದ್ದು ಕರ್ನಾಟಕ ಮಹಾರಾಷ್ಟ್ರಗಳ ತುಂಬೆಲ್ಲಾ ಧರ್ಮಪ್ರಸಾರ ಮಾಡುತ್ತ ಸಂಚರಿಸಿದರು. ಇವರ ನಂತರ ಶ್ರೀ ಸಿದ್ಧಪಂಡಿತರು ಸದ್ಧರ್ಮ ಸಿಂಹಾಸನಾರೋಹಣ ಮಾಡಿದರು. ಈ ಉಜ್ಜಯಿನಿ ಪೀಠ ಪರಂಪರೆಯಲ್ಲಿ ಶ್ರೀ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯರು, ಶ್ರೀ ಜ. ಸಿದ್ಧೇಶ್ವರ ಶಿವಾಚಾರ್ಯರು, ಶ್ರೀ ಜ. ಸಿದ್ಧನಾಥ ಶಿವಾಚಾರ್ಯರು...... ಇವರೇ ಮೊದಲಾದವರು ಪೀಠದ ಪ್ರಭಾವವನ್ನು ಅತಿಶಯಿಸಿದರು ಮತ್ತು ತಮ್ಮ ಶ್ರೀಪೀಠದ ಘನತೆ–ಗೌರವಗಳನ್ನು ಹೆಚ್ಚಿಸಿದರು.

## ಸಮಾನತೆಯ ಪ್ರಥಮ–ಪಾಠ :

ಜಗದ್ಗುರು ಶ್ರೀ ಸಿದ್ಧನಾಥ ಶಿವಾಚಾರ್ಯ ಮಹಾಸ್ವಾಮಿಗಳು ಹೂಲಿಯ ಸಿದ್ಧನಂಜೇಶ್ವರ ವಂಶದ ಮರುಳಾರಾಧ್ಯರಲ್ಲಿ ತಮ್ಮ ಉತ್ತರಾಧಿಕಾರಿಯನ್ನು ಕಂಡುಕೊಂಡು ಅವರಿಗೆ ಪಟ್ಟಗಟ್ಟಿದರು. ಶಿವಯೋಗಸಂಪನ್ನರಾದ ಪರಮಪೂಜ್ಯ ಜಗದ್ಗುರು ಮರುಳಾರಾಧ್ಯರು ಕಾಮಿತ ಫಲಗಳನ್ನು ನೀಡುವ 'ಕಲ್ಪವೃಕ್ಷ'ವಾಗಿದ್ದರು ಮತ್ತು 'ಕಾಮಧೇನು'ವಾಗಿದ್ದರು. ಅವರು ಭಕ್ತರ ಇಷ್ಟಾರ್ಥಗಳನ್ನು ಈಡೇರಿಸಿ ಸಂತಾನವಿಲ್ಲದವರಿಗೆ ಸಂತಾನವನ್ನು, ಸಂಪತ್ತಿಲ್ಲದವರಿಗೆ ಸಂಪತ್ತನ್ನು ಅನುಗ್ರಹಿಸಿದರು. ಕುರುಬ ಅಮೋಘ ಸಿದ್ಧನನ್ನು ಅನುಗ್ರಹಿಸಿ ಗುರುವನ್ನಾಗಿಸಿದ ಕೀರ್ತಿ ಅವರದು. ಇವರ ನಂತರ ಅಧಿಕಾರಕ್ಕೆ ಬಂದ ಜಗದ್ಗುರು ಸಿದ್ಧಮಲ್ಲೇಶ್ವರರು ತಮ್ಮ ತಪೋಬಲದಿಂದ ಭೀಕರ ಬರಗಾಲದಲ್ಲಿ ಮಳೆ ತರಿಸಿ 'ಮಳೆಮಲ್ಲೇಶ್ವರ'ರೆಂದು, ಸಂತಾನವಿಲ್ಲದವರಿಗೆ ಸಂತಾನದ ಕೃಪೆಮಾಡಿ 'ಸಂತಾನ ಮಲ್ಲೇಶ್ವರ'ರೆಂದು ಖ್ಯಾತರಾದರು. ಅನೇಕ ರಾಜ ಮಹಾರಾಜರು

ಮತ್ತು ಐಶ್ವರ್ಯಸಂಪನ್ನರು ಇವರ ಅನುಗ್ರಹದಿಂದ ಸಂತಾನಲಾಭ ಪಡೆದರು. ವಿಜಯನಗರುದ ಪ್ರೌಢರಾಯ ಇವರ ತಪ–ಪ್ರಭಾವಕ್ಕೆ ಒಳಗಾಗಿ ಶಿವಭಕ್ತಿಸಂಪನ್ನನಾದ. ಪರಮಪೂಜ್ಯ ಜಗದ್ಗುರುಗಳು ದಲಿತ–ಧ್ವನಿಗೆ ಕಿವಿಕೊಟ್ಟ ಮಹಾನುಭಾವರು. ಆ ಕಾಲದಲ್ಲಿಯೇ ಅವರು ಸಮಾಜಕ್ಕೆ ಸಮಾನತೆಯ ಪ್ರಪ್ರಥಮ ಪಾಠ ಕಲಿಸಿಕೊಟ್ಟರು. ಪರಿಶಿಷ್ಟ ಜಾತಿಯ ಮಾರನನ್ನು ಮತ್ತು ಆತನ ತಂದೆಯನ್ನು ಅನುಗ್ರಹಿಸಿದ ಪರಮಪೂಜ್ಯರು ದೀನ ಹಾಗೂ ದಲಿತರ ಧ್ವನಿಗೆ ಪೂರಕವಾಗಿ ಅನೇಕ ವಿಧಾಯಕ ಕಾರ್ಯಗಳನ್ನು ಮಾಡಿದರು. ಎಂಬತ್ತು ವರ್ಷಗಳವರೆಗೆ ಬದುಕಿದ ಇವರು ದಲಿತಾದರ ಮತ್ತು ದಲಿತೋದ್ಧಾರಗಳನ್ನೇ ತಮ್ಮ ಪ್ರಮುಖ ಧ್ಯೇಯ–ಧೋರಣೆಗಳನ್ನಾಗಿಸಿಕೊಂಡು ಅವರ ಪ್ರಗತಿ ಮತ್ತು ಸದ್ಗತಿಗಳಿಗಾಗಿ ಅಹರ್ನಿಶಿ ಪರಿಶ್ರಮಿಸಿದರು. ದಲಿತರಿಗೂ ಮತ್ತು ಪರಿಶಿಷ್ಟನಿಗೂ ಕೂಡ ಒಂದು ವ್ಯಕ್ತಿತ್ವವಿದೆ. ಅವರೂ ಕೂಡ ಸಿದ್ಧರಾಗಿ, ಅಮೋಘಸಿದ್ಧರಾಗಿ, ಸತ್ಯಶುದ್ಧ ಸಾಧಕರಾಗಿ ನಿಲ್ಲ ಬಲ್ಲರೆಂದು ಇಡೀ ಜಗತ್ತಿಗೇ ತೋರಿಸಿಕೊಟ್ಟರು.

*[ಮತ್ತೆ ಸ್ಮೃತಿಗೆ : ಕರ್ನಾಟಕ ಪ್ರಾಂತದ ಉಜ್ಜಯಿನಿಯಲ್ಲಿ ಸದ್ಧರ್ಮಪೀಠವು ಮತ್ತೆ ಮರುಸ್ಥಾಪನೆಗೊಂಡ ವಿಷಯವನ್ನು ನಾವು ಇಂದಿನ ಕಾಶೀ ಜಗದ್ಗುರುಗಳಾದ ಪರಮ ಪೂಜ್ಯ ಶ್ರೀ ೧೦೦೮ ಜಗದ್ಗುರು ಡಾ. ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳವರು ಕೋಟೆಕಲ್ಲ–ಗುಳೇದಗುಡ್ಡ ಅಮರೇಶ್ವರ ಶ್ರೀಮಠದ ಪಟ್ಟಾಧ್ಯಕ್ಷರಾಗಿದ್ದಾಗ ಬರೆದ ಮತ್ತು ೧೯೮೮ರಲ್ಲಿ ಹೊನ್ನಾಳಿಯ ಹಿರೇಕಲ್ಮಠದ ಚೆನ್ನಚೇತನ ಪ್ರಕಾಶನದಿಂದ ಪ್ರಕಾ ಶಿತವಾದ "ವೀರಶೈವ ಪಂಚಪೀಠ ಪರಂಪರೆ" ಎಂಬ ಪುಸ್ತಕದಿಂದ ತೆಗೆದುಕೊಂಡಿದ್ದೇವೆ. ಪರಮಪೂಜ್ಯ ಜಗದ್ಗುರುಗಳು ಈ ವಿಷಯವನ್ನು ಬರೆಯುವಾಗ ಹೂಲಿಯ ಪಂಚವಣ್ಣಿಗೆಯ ನಂದೀಶ ಶಿವಕವಿ ವಿರಚಿತ "ಶ್ರೀ ಜಗದ್ಗುರು ಮರುಳಾರಾಧ್ಯ ವಿಜಯ" ಎಂಬ ಕಾವ್ಯದ ಗದ್ಯಾನುವಾದರೂಪವಾದ ಪಂಡಿತ ಚೆನ್ನಬಸಪ್ಪ ಕವಲಿ ಹಾಗೂ ವೇದಮೂರ್ತಿ ಮಠದ ಮರಿದೇವಸ್ವಾಮಿಗಳಿಂದ ಸಂಪಾದಿಸಲ್ಪಟ್ಟು,೧೯೭೯ರಲ್ಲಿ ಪ್ರಕಟವಾದ "ಶ್ರೀ ಮರುಳಸಿದ್ಧಾಂಕ" ಎಂಬ ಗ್ರಂಥವನ್ನು ಆಧಾರವಾಗಿ ಮತ್ತು ಆಕರವಾಗಿ ಪಡೆದುಕೊಂಡಿದ್ದಾರೆ ಹಾಗೂ ೧೯೩೮ರಲ್ಲಿ ಕಾಶಿಯಲ್ಲಿ ಪ್ರಕಾಶಿತವಾದ ವಿದ್ವಾನ್ ರಾಮದಾಸ ಗೌಡನಿಂದ ಹಿಂದೀ ಭಾಷೆಯಲ್ಲಿ ವಿರಚಿತವಾದ 'ಹಿಂದೂತ್ವ' ಎಂಬ ಗ್ರಂಥದಿಂದ ಕೆಲ ವಿಷಯಗಳನ್ನು ಗ್ರಹಿಸಿಕೊಂಡಿದ್ದಾರೆ ಎಂಬುವುದನ್ನು ನಾವು ಇಲ್ಲಿ ಮತ್ತೊಮ್ಮೆ ಓದುಗರ ಜ್ಞಾಪಕಕ್ಕೆ ತಂದುಕೊಡುತ್ತಲಿದ್ದೇವೆ.]*

## ಶ್ರೀಪೀಠದ ಇಂದು :

ಉಜ್ಜಯಿನಿ ಶ್ರೀ ಸದ್ಧರ್ಮಪೀಠವು ಇದುವರೆಗೆ ೧೧೦ ಜಗದ್ಗುರುಗಳನ್ನು ಕಂಡಿದೆ. ಉಜ್ಜಯಿನಿ ಸದ್ಧರ್ಮಪೀಠದ ೧೦೯ನೆಯ ಜಗದ್ಗುರುಗಳಾದ ಪರಮಪೂಜ್ಯ

ಶ್ರೀ ೧೦೦೮ ಜಗದ್ಗುರು ಸಿದ್ಧೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರು ಹಾಗೂ ಸದ್ಧರ್ಮಪೀಠದ ೧೧೧೦ನೆಯ ಜಗದ್ಗುರುಗಳಾದ ಶ್ರೀ ೧೦೦೮ ಜಗದ್ಗುರು ಮರುಳಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳವರು ಸದ್ಯ ಶ್ರೀಪೀಠದ ಮೇಲೆ ವಿರಾಜಮಾನರಾಗಿದ್ದು ಭಕ್ತಜನತೆಯನ್ನು ಅನುಗ್ರಹಿಸುತ್ತಲಿದ್ದಾರೆ ಮತ್ತು ಆಶೀರ್ವದಿಸುತ್ತಲಿದ್ದಾರೆ.

### ಅಗೋಚರ ಇತಿಹಾಸ :

ಶ್ರೀಪೀಠದ ಇತಿಹಾಸವು ಸಾಕಷ್ಟು ಶ್ರೀಮಂತವಾಗಿದ್ದರೂ ಬಹಳಷ್ಟು ಜನ ಪೀಠಾಧಿಪತಿಗಳ ಚರಿತ್ರೆಯು ಕಾಲಗರ್ಭವನ್ನು ಸೇರಿ ಅಜ್ಞಾತವಾಗಿ ನಿಂತುಕೊಂಡಿದೆ. ಪರಮಪೂಜ್ಯ ಪೀಠಾಚಾರ್ಯರ ದಾಖಲಾತ್ಮಕ ಜೀವನದ ದಾಖಲೆಗಳನ್ನು ಉಳಿಸಿಕೊಂಡು ಬರುವುದು ಕಷ್ಟಸಾಧ್ಯವಾಗಿ ಅವರ ಇತಿಹಾಸ ಭೂತಕಾಲದಲ್ಲಿ ಅದೃಶ್ಯವಾಗಿ ಬಿಟ್ಟಿದೆ. ಆದಾಗ್ಯೂ ಇತ್ತೀಚಿನ ಕೆಲ ಪೀಠಾಚಾರ್ಯರ ಸಾಧನೆ–ಸಿದ್ಧಿಗಳ ಪರಿಚಯವನ್ನು ಈ ವಿಧವಾಗಿ ಸಂಗ್ರಹಿಸಿ ಹೇಳಬಹುದು.

### ದೃಶ್ಯ ಇತಿಹಾಸ :

ಶ್ರೀಪೀಠದ ಪಟ್ಟವಲ್ಲರಿಯ ಪ್ರಕಾರ ೧೦೩ನೇ ಪೀಠಾಧೀಶ್ವರರಾದ ಶ್ರೀ ಜಗದ್ಗುರು ಚೆನ್ನವೀರ ಶಿವಾಚಾರ್ಯ ಮಹಾಸ್ವಾಮಿಗಳು ಭಕ್ತರ ಯಶೋಭಿವೃದ್ಧಿಗಾಗಿ ಹಗಲಿರುಳು ಪರಿಶ್ರಮಿಸಿದರು. ತಮ್ಮ 'ಯೋಗ–ಯೋಗ್ಯ' ಜೀವನದಿಂದ ಶಿವಪೂಜಾದುರಂಧರರಾಗಿ ಬಾಳಿ ತಪೋನಿಧಿಗಳೆಂದು ವಿಖ್ಯಾತರಾದರು. ಆಗಾಗ ದೇಶಸಂಚಾರ ಮಾಡುತ್ತ ಜನರಲ್ಲಿ ಭಕ್ತಿ–ಭಾವಗಳನ್ನು ತುಂಬುತ್ತ ವೀರಶೈವ ಧರ್ಮಸಾಮ್ರಾಜ್ಯದ ವಿಸ್ತಾರವನ್ನು ವಿಸ್ತರಿಸಿದರು. ಇವರ ತರುವಾಯ ಅಧಿಕಾರಕ್ಕೆ ಬಂದ ಸದ್ಧರ್ಮ ಸಿಂಹಾಸನದ ೧೦೪ನೆಯ ಪೀಠಾಧೀಶ್ವರರಾದ ಶ್ರೀ ಜಗದ್ಗುರು ಚೆನ್ನಬಸವ ಶಿವಾಚಾರ್ಯ ಮಹಾಸ್ವಾಮಿಗಳು ಆನಂದಮೂರ್ತಿಗಳು. ಜನರಲ್ಲಿ ಪೀಠನಿಷ್ಠೆಯನ್ನು ಹೆಚ್ಚಿಸಿದ ಗೌರವವು ಅವರಿಗೆ ಸಂದಾಯವಾಗುತ್ತದೆ. ೧೦೫ನೇ ಪೀಠಾಧ್ಯಕ್ಷರಾದ ಶ್ರೀ ಜಗದ್ಗುರು ಗುರುಸಿದ್ಧ ಶಿವಾಚಾರ್ಯ ಮಹಾಸ್ವಾಮಿಗಳು ಭಕ್ತಿಪ್ರಿಯರು ಮತ್ತು ಭಕ್ತಪ್ರಿಯರು. ಭಕ್ತೋದ್ಧಾರಕ್ಕಾಗಿ ಹಾಗೂ ಲೋಕದಲ್ಲಿ ಭಕ್ತಿಪ್ರತಿಷ್ಠಾಪನೆಗಾಗಿ ಅವರು ಆಜೀವನ ಪರ್ಯಂತರ ಶ್ರಮಿಸಿದರು, ಸದ್ಧರ್ಮಪೀಠದ ೧೦೬ನೇ ಪೀಠಾಧ್ಯಕ್ಷರಾಗಿ ಅಧಿಕಾರ ವಹಿಸಿಕೊಂಡ ಶ್ರೀ ಜಗದ್ಗುರು ಮರುಳಸಿದ್ಧ ಶಿವಾಚಾರ್ಯ ಮಹಾಸ್ವಾಮಿಗಳು ತುಂಬು ವಿದ್ಯಾವಂತರು. ಆಕರ್ಷಕ ವಾಗ್ಮಿಗಳು, ಧೈರ್ಯಶಾಲಿಗಳು, ಶಿವಾನುಭವನಿರತರು, ಶಾಸ್ತ್ರಾರ್ಥನಿಪುಣರೂ ಆದ ಪರಮಪೂಜ್ಯ ಜಗದ್ಗುರುಗಳು **'ಶಿಷ್ಯ ಸಂತಾಪಹರಣ'** **'ಶಿವಾನುಭವ'**, **'ಪತಂಜಲಿ ಯೋಗಶಾಸ್ತ್ರ'** ಇತ್ಯಾದಿ ಗ್ರಂಥಗಳನ್ನು ರಚಿಸಿ ಪ್ರಕಟಿಸಿದರು.

ತಮ್ಮ ಶ್ರೀಪೀಠದ ಆಡಳಿತ ವ್ಯವಸ್ಥೆಯ ಸುವ್ಯವಸ್ಥೆಯನ್ನು ಹೆಚ್ಚಿಸುವುದಕ್ಕಾಗಿ ಅವರು ಅನೇಕ ಹೊಸ ಹೊಸ ವಿಧಾಯಕ ಯೋಜನೆಗಳಿಗೆ ಜನ್ಮಕೊಟ್ಟರು. ೧೦೭ನೇ ಪೀಠಾಧ್ಯಕ್ಷರಾದ ಶ್ರೀ ಜಗದ್ಗುರು ಚೆನ್ನವೃಷಭ ಶಿವಾಚಾರ್ಯ ಮಹಾಸ್ವಾಮಿಗಳು ಕನ್ನಡ, ತೆಲಗು, ಸಂಸ್ಕೃತ ಭಾಷೆಗಳಲ್ಲಿ ಅದ್ವಿತೀಯ ಪಂಡಿತರಾಗಿದ್ದರು. ಮಹಾ ಮೇಧಾವಿಗಳಾಗಿದ್ದ ಅವರು ಭಕ್ತೋದ್ಧಾರ ಹಾಗೂ ಸಮಾಜೋದ್ಧಾರ ಕಾರ್ಯದಲ್ಲಿ ತಮ್ಮನ್ನೇ ತಾವು ಉತ್ಸುಕತೆಯಿಂದ ತೊಡಗಿಸಿಕೊಂಡಿದ್ದರು. ಬಳ್ಳಾರಿಯಲ್ಲಿ ಜರುಗಿದ ೫ನೆಯ ಅಖಿಲ ಭಾರತ ವೀರಶೈವ ಮಹಾಸಭೆಗೆ ದಯಮಾಡಿಸುವ ಪವಿತ್ರ ಸಂಕಲ್ಪಮಾಡಿ ಆ ದಿಶೆಯಲ್ಲಿ ಸಾಕಷ್ಟು ಉತ್ಸಾಹವನ್ನು ತಳೆದಿದ್ದರು.

## ಆದರ್ಶ ಹಾಗೂ ಆಚರಣೆಗಳ ಮೇರುಪರ್ವತ :

ಸದ್ಧರ್ಮ ಶ್ರೀಪೀಠದ ೧೦೮ನೆಯ ಪೀಠಾಧ್ಯಕ್ಷರಾದ ಪರಮಪೂಜ್ಯ ಶ್ರೀ ೧೦೦೮ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು ಕರ್ತೃತ್ವ ಶಕ್ತಿಯ ಸಾಕಾರ ರೂಪ. ಅವರು ಆದರ್ಶ ಹಾಗೂ ಆಚರಣೆಗಳ ಮೇರುಪರ್ವತ. ಉಜ್ಜಯಿನಿಯ ಗೌರವವನ್ನು ಊರ್ಜಿತಗೊಳಿಸಿದ ಕೀರ್ತಿ ಅವರದು. ಅವರು ತಮ್ಮ ಜೀವನದ ತುಂಬೆಲ್ಲ ಹಿಂತಿರುಗಿ ನೋಡಿದವರೇ ಅಲ್ಲ. ಅವರ ಜೀವನವೇ ಒಂದು ಸತ್ಯಶುದ್ಧ ಸಂಕಲ್ಪ. ಅವರು ಸಂಕಲ್ಪಿಸಿದ್ದೆಲ್ಲ ಕಲ್ಪಗೊಂಡು ಅವರ ಕಣ್ಮುಂದೆ ನಿಂತುಕೊಳ್ಳುತ್ತಿತ್ತು. ಅತ್ಯಂತ ತರಳ ವಯಸ್ಸಿನಲ್ಲಿಯೇ ಜಗದ್ಗುರುತ್ವದ ಮಹಾಮಣಿಹಕ್ಕೆ ಹೆಗಲುಕೊಟ್ಟ ಅವರು ವಿದ್ವಾಂಸರು ಮತ್ತು ಪಂಡಿತರು. ತರ್ಕ, ವ್ಯಾಕರಣಶಾಸ್ತ್ರಗಳ ಜೊತೆ ಜೊತೆಯಲ್ಲಿ ವೀರಶೈವ ಧರ್ಮಗ್ರಂಥವಾದ ಸಿದ್ಧಾಂತ ಶಿಖಾಮಣಿಯ ಮೇಲೆ ಅವರಿಗೆ ವಿಶೇಷ ಪ್ರಭುತ್ವ ಇತ್ತು. ವೀರಶೈವ ಧರ್ಮದ ಶಿಖಾಮಣಿಯಂತಿದ್ದ ಸಿದ್ಧಾಂತಗಳನ್ನು ಅವರು ಬರೀ ಹೇಳಲಿಲ್ಲ, ಅವುಗಳನ್ನವರು ತಮ್ಮ ಜೀವನದಲ್ಲಿ ಅಳವಡಿಸಿಕೊಂಡಿದ್ದರು. ಅಂತಲೇ ದುಃಖಿತರ ದುಃಖಕ್ಕೆ, ಸಂತಪ್ತರ ಸಂತಾಪಕ್ಕೆ, ನೊಂದವರ ನೋವಿಗೆ ಸ್ಪಂದಿಸುವ ಹಾರ್ದಿಕತೆ ಅವರಲ್ಲಿತ್ತು. ಶಿವಯೋಗಬಲಸಂಪನ್ನರು ಹಾಗೂ ಶಿವಪೂಜಾನಿಷ್ಠರು ಆದ ಪರಮಪೂಜ್ಯರು ಸೃಷ್ಟಿ ಹಾಗೂ ವೃಷ್ಟಿಗಳ ಮೇಲೆ ಪ್ರಭುತ್ವವನ್ನು ಹೊಂದಿದ್ದರು. ಬಳ್ಳಾರಿಯು ಒಂದು ಸಲ ಭೀಕರ ಬರಗಾಲಕ್ಕೆ ತುತ್ತಾದಾಗ ಅಲ್ಲಿ ಧಾರಾಕಾರವಾಗಿ ಮಳೆಯನ್ನು ತರಿಸುವ ಮೂಲಕ ವಿಧಿಯ ವಿಧಾಯಕತೆಯನ್ನೇ ಪ್ರಶ್ನಿಸಿದರು. ನಿತ್ಯವೂ ಅನ್ನಸಂತರ್ಪಣೆ ಮಾಡಿ ಜನರನ್ನು 'ಜಠರಾಸುರ'ನ ದಾಳಿಯಿಂದ ರಕ್ಷಿಸಿದರು. ಧರ್ಮಜಾಗೃತಿಗಾಗಿ ಕರ್ನಾಟಕ ಮಹಾರಾಷ್ಟ್ರಗಳ ತುಂಬೆಲ್ಲ ಸಂಚರಿಸಿ ಜನರ ಧಾರ್ಮಿಕ ಉತ್ಸಾಹವನ್ನು ನವೀಕರಿಸಿದರು. ಗೋ–ಸಂರಕ್ಷಣಾ ಮಂತ್ರವನ್ನು ತಮ್ಮ ಪ್ರಾಣವನ್ನಾಗಿರಿಸಿಕೊಂಡಿದ್ದರು. ಅದಲ್ಲದೆ ಗೋಮಯದಿಂದ ಪರಿಶುದ್ಧವಾದ ವಿಭೂತಿಯನ್ನು ಸಿದ್ಧಗೊಳಿಸಿ ಧರಿಸುವತ್ತ ಜನರ ಒಲವನ್ನು ಹೆಚ್ಚಿಸಿ ಪ್ರೋತ್ಸಾಹಿಸುತ್ತಿದ್ದರು.

೧೯೧೮ರಲ್ಲಿ ಕಾಶಿಯಲ್ಲಿ ನಡೆದ 'ಪಂಚಾಚಾರ್ಯರ ಸಮ್ಮೇಳನ'ದಲ್ಲಿ ಧರ್ಮಪ್ರಚಾರ ದೃಷ್ಟಿಯಿಂದ ೧೩ ಗೊತ್ತುವಳಿಗಳನ್ನು ಮಂಡಿಸಿ ಮಾತನಾಡಿದರು. ಬೀರೂರಿನಲ್ಲಿ ನಡೆದ ೯ನೇ ಅಖಿಲ ಭಾರತ ವೀರಶೈವ ಮಹಾಸಭೆಗೆ ತಮ್ಮ ಸಮಾನ ಪೀಠಾಚಾರ್ಯರೊಂದಿಗೆ ದಯಮಾಡಿಸಿ ತಮ್ಮ ತಪೋವಾಣಿಯಿಂದ ವೀರಶೈವ ಮಹಾಜನತೆಯನ್ನು ಸಂತೃಪ್ತಗೊಳಿಸಿದರು. ಉಜ್ಜಯಿನಿ ಶ್ರೀಪೀಠದಲ್ಲಿ ೫ನೇ ಪಟ್ಟ ಹಾಗೂ ಚರಾಧಿಕಾರಿಗಳ ಸಮ್ಮೇಳನ ನಡೆಸಿದ ಕೀರ್ತಿ ಇವರದು. ವೀರಶೈವರ ಉಳಿದ ಮಹಾಪೀಠಗಳಿಗೆ ಯಾವುದೇ ತೆರನಾದ ಆಪತ್ತು–ವಿಪತ್ತುಗಳು ಭೆಟ್ಟಿಕೊಟ್ಟಾಗ ನೇರವಾಗಿ ಅಲ್ಲಿಗೆ ಹೋಗಿ ತಮ್ಮ ಸಮಾನ ಪೀಠಾಚಾರ್ಯರ ಜೊತೆ ಸಮಾಲೋಚನೆ ಮಾಡಿ ಅವರ ನೈತಿಕಬಲವನ್ನು ಮತ್ತು ಆತ್ಮವಿಶ್ವಾಸವನ್ನು ಹೆಚ್ಚಿಸುತ್ತಲಿದ್ದರು.

## ಜ್ಞಾನಗುರು ವಿದ್ಯಾಪೀಠದ ಜನಕ :

ಪರಮಪೂಜ್ಯ ಜಗದ್ಗುರುಗಳು ಉಜ್ಜಯಿನಿ ಪೀಠದ ಪುನರುತ್ಥಾನ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡು ಅನೇಕ ವಿಧಾಯಕ ಕಟ್ಟಡಗಳು ಮೇಲೆದ್ದು ನಿಲ್ಲಲಿಕ್ಕೆ ಕಾರಣೀಭೂತರಾದರು. ಆ ನಿಟ್ಟಿನಲ್ಲಿ ಅವರು ಪ್ರಾರಂಭಿಸಿದ ನೂರೊಂದು ಗೋವುಗಳು ಏಕಕಾಲದಲ್ಲಿಯೇ ರಕ್ಷಣೆಯಾಗುವ ವಿಶಾಲವಾದ ಗೋಶಾಲೆ, ಬೃಹತ್ ಪಂಚಾಚಾರ್ಯ ಸಭಾಮಂಟಪ, ಮಹಾದಾಸೋಹಕ್ಕಾಗಿ ಪಾಕಶಾಲೆ, ಬೃಹತ್ ಶಿವಪೂಜಾ ಮಂದಿರ ಇವೇ ಮೊದಲಾದವುಗಳು ಪ್ರಮುಖವಾದವುಗಳು. ಪೂಜ್ಯ ಸನ್ನಿಧಿಯವರು ವಿದ್ಯಾ ಪ್ರೇಮಿಗಳು ಹಾಗೂ ವಿದ್ವಾಂಸರು ಆಗಿದ್ದರಿಂದ ಶ್ರೀಪೀಠದಲ್ಲಿ ಶ್ರೀ ದಾರುಕಾಚಾರ್ಯ ಸಂಸ್ಕೃತ ಪಾಠಶಾಲೆಯನ್ನು ಪ್ರಾರಂಭಿಸಿದರು. ಆ ಪಾಠಶಾಲೆಯ ಪ್ರಾಧ್ಯಾಪಕರು ಮತ್ತು ಸದ್ಧರ್ಮಪೀಠದ ಆಸ್ಥಾನ ವಿದ್ವಾಂಸರು ಆದ ಪಂಡಿತ ಉಮಚಗಿ ಶಂಕರ ಶಾಸ್ತ್ರಿಗಳವರಿಂದ ಅನೇಕ ಪಠ್ಯಗ್ರಂಥಗಳನ್ನು ಬರೆಯಿಸಿ ಶ್ರೀಪೀಠದಿಂದ ಪ್ರಕಟ ಗೊಳಿಸಿದರು. ಶ್ರೀಪೀಠದಿಂದ ಧರ್ಮಪ್ರದ, ಜ್ಞಾನಪ್ರದ ಹಾಗೂ ಬೋಧಪ್ರದ ಗ್ರಂಥಗಳನ್ನು ಪ್ರಕಾಶ ಪಡಿಸುವದಕ್ಕಾಗಿಯೇ 'ಜ್ಞಾನಗುರು ವಿದ್ಯಾಪೀಠ'ವನ್ನು ಸ್ಥಾಪಿಸಿದರು. ಆ ವಿದ್ಯಾಪೀಠವು ಇದುವರೆಗೂ ತನ್ನ ಕಾರ್ಯವನ್ನು ಅನೂಚಾನವಾಗಿ ಮುಂದೆ ಸಾಗಿಸಿಕೊಂಡು ಮುನ್ನಡೆದಿರುವುದು ತುಂಬ ಸಂತೋಷದ ಸಂಗತಿ.

## ವ್ಯಕ್ತಿತ್ವದ ಸುತ್ತಮುತ್ತ :

ಪರಮಪೂಜ್ಯರು ಬಳ್ಳಾರಿ ಭಾಗದ ಸಮಸ್ತ ವೀರಶೈವರ ವಿದ್ಯಾಭಿವೃದ್ಧಿಗಾಗಿ ೧೬–೧೦–೧೯೧೬ರಂದು 'ಮದ್ರಾಸ್ ವೀರಶೈವ ವಿದ್ಯಾವರ್ಧಕ ಸಂಘ'ವನ್ನು ಸ್ಥಾಪಿಸಿ ೫೦೦೦ ರೂಪಾಯಿಗಳ ಮೂಲನಿಧಿಯನ್ನು ಆಶೀರ್ವದಿಸಿದರು. ಅವರ ಆಶೀರ್ವಾದದಿಂದ ಬೆಳೆದ ವಿದ್ಯಾವರ್ಧಕ ಸಂಘವು ಇಂದು ವ್ಯಾಪಕವಾಗಿ ಬೆಳೆದು ನಿಂತು 'ವೀರಶೈವ

ವಿದ್ಯಾವರ್ಧಕ ಸಂಘ'ವೆಂಬ ಹೆಸರಿನಿಂದ ಪ್ರಾಥಮಿಕ ಹಂತದಿಂದ ಮೊದಲುಮಾಡಿಕೊಂಡು ವೈದ್ಯಕೀಯ ಸ್ಕೂಲು–ಕಾಲೇಜುಗಳವರೆಗೆ ತನ್ನ ಕಾರ್ಯಕ್ಷೇತ್ರವನ್ನು ಹೆಚ್ಚಿಸಿಕೊಂಡು ಕಾರ್ಯಮಾಡುತ್ತಿರುವುದು ಎಲ್ಲ ವೀರಶೈವರು ತುಂಬು ಹೃದಯದಿಂದ ಹೆಮ್ಮೆಪಡಬೇಕಾದ ವಿಷಯವೇ ಸರಿ. ಪರಮಪೂಜ್ಯ ಜಗದ್ಗುರುಗಳು ತಮ್ಮ ಜೀವನದ ತುಂಬೆಲ್ಲ ಅನೇಕ ವಿಧಾಯಕ ಕಾರ್ಯಗಳನ್ನು ಮಾಡುತ್ತಲೇ ಬಂದರು. ಸೊಲ್ಲಾಪುರದಲ್ಲಿಯ ಶ್ರೀಮದ್ ವೀರಶೈವ ವಾರದ ಸಂಸ್ಕೃತ ಪಾಠಶಾಲೆಯು ಆರ್ಥಿಕ ಆಧಾರವನ್ನು ಕಳೆದುಕೊಂಡು ಬಾಡಿ ನಿಂತುಕೊಂಡಾಗ ಪರಮಪೂಜ್ಯರು ಅದಕ್ಕೆ ಪುನಃ ಕಾಯಕಲ್ಪವನ್ನೊದಗಿಸಿಕೊಟ್ಟರು. ಪಂಚಾಚಾರ್ಯ ಸೇವಾನಿರತ ಪಂಡಿತ ಲಿಂಗೈಕ್ಯ ಕಾಶೀನಾಥ ಶಾಸ್ತ್ರಿಗಳ ಪರಿಶ್ರಮದಿಂದ ಮೈಸೂರಿನಲ್ಲಿ ಸಂಸ್ಥಾಪಿಸಲ್ಪಟ್ಟ 'ಪಂಚಾಚಾರ್ಯ ಪ್ರಭಾ' ಪತ್ರಿಕೆಯನ್ನು ತನು–ಮನ–ಧನಗಳಿಂದ ಆಶೀರ್ವದಿಸಿದರು.

## ಲೋಕಕಲ್ಯಾಣದ ಪವಿತ್ರ–ಪರಿಮಳ :

ಪರಮಪೂಜ್ಯ ಸನ್ನಿಧಿಯವರು ವೀರಶೈವ ಸಮಾಜದ ಹಿತಕ್ಕಾಗಿ ಮತ್ತು ಲೋಕಕಲ್ಯಾಣಕ್ಕಾಗಿ ಪಟ್ಟ ಪರಿಶ್ರಮವನ್ನು ಕೇವಲ ಕೆಲವೇ ಕೆಲವು ಪುಟಗಳ 'ಲಕ್ಷ್ಮಣ ರೇಖೆಯಲ್ಲಿ ಹಿಡಿದು ನಿಲ್ಲಿಸುವದು ಸಾಧ್ಯವಿಲ್ಲ. ಪರಮಪೂಜ್ಯರು ಸಂವೇದನಾಶೀಲ ವ್ಯಕ್ತಿತ್ವಸಂಪನ್ನರು. ಆದ್ದರಿಂದಲೇ ಅವರು ಸಮಾಜದ ಮತ್ತು ಜನತೆಯ 'ಬೇಕು–ಬೇಡಿಕೆ'ಗಳಿಗೆ ಸಾಕಷ್ಟು ಸಂವೇದಿಸಿ, ಸ್ಪಂದಿಸಿ ತಮ್ಮೆಲ್ಲ ಯೋಗಶಕ್ತಿ, ತಪಶ್ಶಕ್ತಿ ಕರ್ತೃತ್ವ ಶಕ್ತಿಗಳನ್ನು ಧಾರಾಳವಾಗಿ ಸಮಾಜದ ಹಿತಕ್ಕಾಗಿ ವಿನಿಯೋಗಿಸಿದರು. ಅವರ ಜೀವನವೇ ಒಂದು 'ಪವಿತ್ರ ಪ್ರೇರಣೆ' ಇದ್ದಂತಿದೆ. ಅಲ್ಲಿ ಸ್ವಾರ್ಥದ ಕಸವಿಲ್ಲ. ವೈಯಕ್ತಿಕ ಸುಖದ ಆಮಿಷವಿಲ್ಲ. ಅಲ್ಲಿ ಮತ್ತು ಅವರಲ್ಲಿ ತುಂಬಿಕೊಂಡಿರುವುದು ಕೇವಲ ಲೋಕಕಲ್ಯಾಣದ ಪವಿತ್ರ–ಪರಿಮಳ, ಸಮಾಜ ಸುಧಾರಣೆಯ ಶುದ್ಧ–ಸುಗಂಧ.

## ಧ್ವನಿಗೆ ಪ್ರತಿಧ್ವನಿ :

ಪರಮಪೂಜ್ಯ ಜಗದ್ಗುರು ಶ್ರೀ ೧೦೦೮ ಸಿದ್ಧೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರು ಶ್ರೀಮದುಜ್ಜಯಿನಿ ಸದ್ಧರ್ಮ ಸಿಂಹಾಸನದ ೧೦೮ನೆಯ ಪೀಠಾಧಿಕಾರಿಗಳು. ಕರ್ನಾಟಕ ರಾಜ್ಯದ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿನ ಆನೆಸಿದ್ಧಾಪುರ ಬೃಹನ್ಮಠದ ಶ್ರೀ ಷ.ಬ್ರ. ತ್ರಿಲೋಚನ ಶಿವಾಚಾರ್ಯ ಸ್ವಾಮಿಗಳೆಂದು ಖ್ಯಾತರಾದ ಪರಮಪೂಜ್ಯರನ್ನು ಸದ್ಧರ್ಮ ಸಿಂಹಾಸನದ ಉತ್ತರಾಧಿಕಾರ ವನ್ನು ವಹಿಸಿಕೊಳ್ಳಲು ಆಗ್ರಹಿಸಿದಾಗ ಅವರು ಭಕ್ತಮಾನಸವನ್ನು ಸಂತೋಷ

ಪಡಿಸುವುದಕ್ಕಾಗಿ ಮತ್ತು ಸದ್ಧರ್ಮದ ಧ್ವನಿಯನ್ನು ಪ್ರತಿಧ್ವನಿಸಲು ತಮ್ಮ ಸಮ್ಮತಿಯನ್ನಿತ್ತರು. ದಿನಾಂಕ : ೨-೨-೧೯೩೭ನೆಯ ಭಾನುವಾರದಂದು ಶ್ರೀಮದ್ ರಂಭಾಪುರಿ ವೀರ ಸಿಂಹಾಸನಾಧೀಶ್ವರ ಶ್ರೀ ೧೦೦೮ ಜಗದ್ಗುರು ಶಿವಾನಂದರಾಜೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳ ಮತ್ತು ಹಿಮವತ್ಕೇದಾರ ವೈರಾಗ್ಯ ಸಿಂಹಾಸನಾಧೀಶ್ವರ ಶ್ರೀ ೧೦೦೮ ಜಗದ್ಗುರು ನೀಲಕಂಠಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ಉಜ್ಜಯಿನಿ ಸದ್ಧರ್ಮಪೀಠದ ಪೀಠಾಧ್ಯಕ್ಷರಾಗಿ ಅಧಿಕಾರ ಸ್ವೀಕಾರಮಾಡಿದರು. ಪರಮಪೂಜ್ಯ ಜಗದ್ಗುರುಗಳವರು ಸುಮಾರು ೫೦ಕ್ಕೂ ಹೆಚ್ಚು ವರ್ಷಗಳಿಂದ ಪೀಠೋದ್ಧಾರ ಮತ್ತು ಭಕ್ತೋದ್ಧಾರ ಕಾರ್ಯಗಳನ್ನು ಮಾಡುತ್ತ ಬಂದಿದ್ದಾರೆ. ತಮ್ಮ ಪೂರ್ವಾಚಾರ್ಯರ ಶೇಷ-ಕನಸುಗಳನ್ನೆಲ್ಲ ನನಸನ್ನಾಗಿಸಿದ್ದಾರೆ. ಪೂರ್ವಾಚಾರ್ಯರ ಅಪೂರ್ಣಗೊಂಡ ಸಂಕಲ್ಪಗಳನ್ನು ಪೂರೈಸಿದ್ದಾರೆ. ಅನೇಕ ಕಟ್ಟಡಗಳನ್ನು ಪುನರ್ನವೀಕರಿಸಿ ಅವೆಲ್ಲ ಸುಸಜ್ಜಿತವಾಗಿ ಮತ್ತು ಸುವ್ಯವಸ್ಥಿತವಾಗಿ ನಿಲ್ಲುವಂತೆ ಮಾಡಿದ್ದಾರೆ. ಲಿಂಗೈಕ್ಯ ಜಗದ್ಗುರು ಶ್ರೀ ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳಿಂದ ಸ್ಥಾಪಿಸಲ್ಪಟ್ಟ 'ಜ್ಞಾನಗುರು ವಿದ್ಯಾಪೀಠ'ವನ್ನು ಸರಕಾರಿ ಕಛೇರಿಗಳಲ್ಲಿ ನೋಂದಾಯಿಸುವ ಮೂಲಕ ಆ ವಿದ್ಯಾಪೀಠದ 'ಸ್ಥಾಯಿ ವ್ಯಕ್ತಿತ್ವ'ಕ್ಕೆ ಶ್ರೀಕಾರ ಹೇಳಿದ್ದಾರೆ. ಈ ಸಂಸ್ಥೆಯ ಗತಿ-ವಿಧಾನಗಳು ಸಾಂಗವಾಗಿ ನಡೆದುಕೊಂಡಿರಬೇಕೆಂಬ ಉದ್ದೇಶದಿಂದ ಅದಕ್ಕಾಗಿ ಸಾಕಷ್ಟು ಭೂಮಿ ಹಾಗೂ ಧನವನ್ನು ಸಂಗ್ರಹಿಸಿ ಅದನ್ನು ಆರ್ಥಿಕವಾಗಿ ಸಬಲಗೊಳಿಸಿದ್ದಾರೆ. ವಿದ್ಯಾಪ್ರೇಮಿಗಳಾದ ಶ್ರೀಗಳು ಐದು ಸಂಸ್ಕೃತ ಪಾಠ ಶಾಲೆಗಳನ್ನು ಪ್ರಾರಂಭಿಸಿದ್ದು ಉಜ್ಜಯಿನಿ, ಯಲಿವಾಳ, ಹರಪನಹಳ್ಳಿ, ಯಶವಂತನಗರ, ಹೊಳಲಗುಂದಿ ಮುಂತಾದ ಗ್ರಾಮಗಳಲ್ಲಿ ಪ್ರೌಢಶಾಲೆ ಮತ್ತು ಕಾಲೇಜುಗಳನ್ನು ಸ್ಥಾಪಿಸಿದ್ದಾರೆ. ಇವುಗಳ ಜೊತೆ ಜೊತೆಯಲ್ಲಿ ಚಿತ್ರದುರ್ಗ, ಗದಗ, ತುರವನೂರು ಇತ್ಯಾದಿ ಸ್ಥಳಗಳಲ್ಲಿ ಪ್ರಸಾದನಿಲಯಗಳನ್ನು ಸಂಸ್ಥಾಪಿಸಿದ್ದಾರೆ. ಧರ್ಮಪ್ರಚಾರಕ್ಕಾಗಿ ಮತ್ತು ಧರ್ಮವು ಮನೆ ಮನೆ ತಲುಪಬೇಕೆಂಬ ಉದ್ದೇಶದಿಂದ ಶ್ರೀಪೀಠದಿಂದ 'ಸದ್ಧರ್ಮ ಪ್ರಭಾ' ಎಂಬ ತ್ರೈಮಾಸಿಕ ಪತ್ರಿಕೆಯೊಂದನ್ನು ನಡೆಸುತ್ತಲಿದ್ದಾರೆ. ಈ ವಿಧವಾಗಿ ಇನ್ನೂ ಹತ್ತುಹಲವಾರು ಲೋಕೋಪಯೋಗಿ ಕೆಲಸ-ಕಾರ್ಯಗಳು ಅವರ ಆಶೀರ್ವಾದದ ಬಲದಿಂದ ಕರ್ನಾಟಕ ಇತ್ಯಾದಿ ಪ್ರಾಂತಗಳಲ್ಲಿ ಮೈದಳೆದುನಿಂತಿವೆ.

### ತುಂಬು ಶತಾಯುಷಿಗಳು :

ಪರಮಪೂಜ್ಯ ಜಗದ್ಗುರುಗಳವರದು ತುಂಬು ಜೀವನ. ಈಗಾಗಲೇ ಅವರ

ವಯಸ್ಸು ನೂರರ ಗಡಿಯನ್ನು ದಾಟಿ ಮುಂದುವರೆದಿದೆ. ಶತಾಯುಷಿಗಳಾದ ಅವರ ಮುಖದಲ್ಲಿ ದಿವ್ಯ ತೇಜಸ್ಸು ತುಂಬಿಕೊಂಡಿದೆ. ಅವರ ಕಳೆ ತುಂಬಿದ ಮುಖ, ಕಾಂತಿ ತುಂಬಿದ ಕಣ್ಣುಗಳನ್ನು ನೋಡುತ್ತ ನಿಂತರೆ ಆಕರ್ಷಣೆಗೆ ಒಳಗಾಗದವನು ಕೂಡ ಆಕರ್ಷಣೆಗೆ ಒಳಗಾಗುತ್ತಾನೆ. ವಯೋವೃದ್ಧರಾದ ಜಗದ್ಗುರುಗಳಲ್ಲಿನ ಉತ್ಸಾಹ ಮತ್ತು ಲವಲವಿಕೆಗಳು ಯಾವುದೇ ವಿಧವಾದ ಕುಂದು–ಕೊರತೆಗೆ ಒಳಗಾಗಿಲ್ಲ. ಶಿವ ಪೂಜಾ ವೈಭವದಲ್ಲಿ ಅವರು ಮೈಮರೆಯುತ್ತಾರೆ. ಸುಮಾರು ನೂರು ವಸಂತಗಳನ್ನು ಸಾಕ್ಷಿಸಿದ ಪರಮಪೂಜ್ಯರು ಬಹುದೊಡ್ಡ ಅನುಭವದ ಬಾಂಢಾರವನ್ನೇ ತಮ್ಮ ಆಸ್ತಿಯನ್ನಾಗಿಸಿಕೊಂಡಿದ್ದಾರೆ. ಅವರ ಅನುಭವದ ಮಾತುಗಳನ್ನು ಕೇಳುತ್ತಲಿದ್ದರೆ ಸಮಯ ಸರಿದುಕೊಳ್ಳುತ್ತಿರುವುದು ಗೊತ್ತಾಗುವುದೇ ಇಲ್ಲ. ಸತ್ಯವನ್ನು ಹೇಳುವಾಗ ಹಾಗೂ ನ್ಯಾಯವನ್ನು ಬೆಂಬಲಿಸುವಾಗ ಪೂಜ್ಯರು ಯಾವತ್ತೂ ಹಿಂದೇಟು ಹಾಕುವದಿಲ್ಲ. ಅವರಲ್ಲಿ ವಯೋಬಲ, ತಪೋಬಲ, ಯೋಗಬಲ, ಅನುಭವಬಲ..... ಉಳಿದೆಲ್ಲ ಬಲಗಳು ಮನೆಮಾಡಿ ನಿಂತುಕೊಂಡಿವೆ. ಅವರ ಮಾತಿನಲ್ಲಿ ದೃಢತೆಯಿದೆ. ಇತ್ತೀಚಿನ ಎಲ್ಲ ಪೀಠಾಚಾರ್ಯರಿಗೂ ಅವರು ಹಿರಿಯರಾಗಿದ್ದು ಅವರ ಮಾರ್ಗದರ್ಶನವನ್ನು ಅಪೇಕ್ಷಿಸಿದಾಗ ಮಾರ್ಗದರ್ಶನವನ್ನು ಮಾಡುತ್ತಲಿರುತ್ತಾರೆ. ಉಳಿದೆಲ್ಲ ಪೀಠಾಚಾರ್ಯರು ವಯೋವೃದ್ಧರಾದ ಇವರ ಧ್ವನಿಯನ್ನು ಗೌರವಿಸುತ್ತಾರೆ.

## ಜಗದ್ಗುರು ತಾತಂಗೆ ತುಲಾಭಾರ :

ಪರಮಪೂಜ್ಯರ ಜ್ಞಾನಬಾಂಢಾರವು ಕೂಡ ಶ್ರೀಮಂತವಾಗಿದೆ. ವೀರಶೈವ ಸಿದ್ಧಾಂತಗಳನ್ನು ಅತ್ಯಂತ ಆತ್ಮೀಯವಾಗಿ ಅರಿತುಕೊಂಡ ಪರಮಪೂಜ್ಯರು ಅಷ್ಟಾವರಣಗಳ ಕುರಿತು ಅತ್ಯಂತ ಸುದೀರ್ಘವಾಗಿ ಮಾತನಾಡುತ್ತಾರೆ. ಅಷ್ಟಾವರಣಗಳಲ್ಲಿರುವ ಒಂದೊಂದು ಆವರಣದ ಮೇಲೂ ಸಾಕಷ್ಟು ದಿನಗಳವರೆಗೆ ಅಧಿಕೃತವಾಗಿ ಮಾತನಾಡಬಲ್ಲರು. ವೀರಶೈವ ಅಷ್ಟಾವರಣಗಳು ಅವರಿಗೆ ಬರೀ ಆವರಣಗಳಾಗಿರದೆ ಅಂಗಗಳಾಗಿ ನಿಂತುಕೊಂಡಿವೆ. ಅದು ಕೂಡ ಅವಿಭಾಜ್ಯ ಅಂಗಗಳು !! ಪರಮಪೂಜ್ಯರು ಭಕ್ತರ ಜೊತೆ ಅತ್ಯಂತ ಹಾರ್ದಿಕ ಸಂಬಂಧವನ್ನು ಇರಿಸಿಕೊಂಡಿದ್ದಾರೆ. ಅವರು ಭಕ್ತರನ್ನು ನೇರವಾಗಿ ಸಂಪರ್ಕಿಸುತ್ತಾರೆ ಮತ್ತು ಭಕ್ತರ ಮೇಲೆ ಪ್ರೀತಿ–ವಾತ್ಸಲ್ಯಗಳಿಂದ ಅಧಿಕಾರವನ್ನು ಚಲಾಯಿಸುತ್ತಾರೆ. ಆದ್ದರಿಂದಲೇ ಉಜ್ಜಯಿನಿ 'ಜಗದ್ಗುರು ತಾತ'ನೆಂದರೆ ಎಲ್ಲರಿಗೂ ತುಂಬಾ ಗೌರವ ಮತ್ತು ಆದರ. ಭಕ್ತರು ಅವರನ್ನು ಎಷ್ಟೊಂದು ಅಭಿಮಾನದಿಂದ ಪ್ರೀತಿಸುತ್ತಾರೆಂಬುದಕ್ಕೆ ಇತ್ತೀಚೆಗೆ ಬಳ್ಳಾರಿ ಜಿಲ್ಲೆಯ ಕೊಟ್ಟೂರಿನಲ್ಲಿ ಅತ್ಯಂತ ಅದ್ದೂರಿ ಮತ್ತು ವೈಭವದಿಂದ ನಡೆದ ಪರಮಪೂಜ್ಯ ಜಗದ್ಗುರು ತಾತನವರ ತುಲಾಭಾರವೇ ಸಾಕ್ಷಿ.

## ಅಧಿಕಾರದ ವಿಕೇಂದ್ರೀಕರಣ :

ಪರಮಪೂಜ್ಯ ಜಗದ್ಗುರು ಶ್ರೀ ಸಿದ್ಧೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳವರು ವಯೋವೃದ್ಧರಾಗಿರುವುದರಿಂದ ಜಗದ್ಗುರು ಪೀಠದ ಎಲ್ಲ ಕೆಲಸ–ಕಾರ್ಯಗಳನ್ನು ನಿರ್ವಹಿಸಿಕೊಂಡು ಹೋಗುವದು ಅಷ್ಟೊಂದು ಸುಲಭದ ಮಾತಲ್ಲ. ಈ ಸತ್ಯವನ್ನೊಪ್ಪಿಕೊಂಡ ವಯೋವೃದ್ಧ ಜಗದ್ಗುರುಗಳ ಮಾನಸಿಕವು ತಮ್ಮ ಪೀಠಕ್ಕೆ ಚರಪಟ್ಟಾಧ್ಯಕ್ಷರೊಬ್ಬರ ಅವಶ್ಯಕತೆ ಇದೆ ಎಂಬುದನ್ನು ಮನಗಂಡಿತು. ಈ ನಿಟ್ಟಿನಲ್ಲಿ ಆಲೋಚಿಸಿದ ಪರಮಪೂಜ್ಯರು ಒಂದು ಯೋಗ್ಯ ನಿರ್ಣಯವನ್ನು ಕೈಕೊಂಡರು. ತಮ್ಮ ನಿರ್ಣಯವನ್ನು ಕಾರ್ಯರೂಪಕ್ಕೆ ಇಳಿಸುವ ಹಂತದಲ್ಲಿ ಅವರು ತಮ್ಮ ಶ್ರೀಪೀಠದ ಚರಪಟ್ಟಾಧ್ಯಕ್ಷ ಸ್ಥಾನಕ್ಕೆ ಎಲ್ಲ ವಿಧಗಳಿಂದಲೂ ಯೋಗ್ಯರಾದ ಮೈಸೂರು ಅರಮನೆ ಜಪ್ಪದಕಟ್ಟೆ ಬೃಹನ್ಮಠದ ಶ್ರೀ ಷ.ಬ್ರ. ಶಿವಪ್ರಕಾಶ ಶಿವಾಚಾರ್ಯ ಸ್ವಾಮಿಗಳನ್ನು ಗಮನಿಸಿ ಅವರಿಗೆ ಆ ಹೊಣೆಗಾರಿಕೆಯನ್ನು ವಹಿಸಿಕೊಡಲು ನಿಶ್ಚಯಿಸಿದರು. ಸದ್ಧರ್ಮ ಪೀಠದ ಪ್ರಾಚೀನ ಪದ್ಧತಿಯಂತೆ ದಿನಾಂಕ : ೨೮–೮–೧೯೮೫ ರ ಶುಭಮುಹೂರ್ತದಲ್ಲಿ ಪೂಜ್ಯರಿಗೆ ಪಂಚ ಮುದ್ರಾಪೂರ್ವಕ ಕಿರೀಟಧಾರಣೆಯನ್ನು ಮಾಡಿಸುವ ಮೂಲಕ ಚರಪಟ್ಟಾಧಿಕಾರವನ್ನು ಅನುಗ್ರಹಿಸಿ ಶ್ರೀ ೧೦೦೮ ಜಗದ್ಗುರು ಮರುಳಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳೆಂಬ ನೂತನ ನಾಮಕರಣವನ್ನು ಮಾಡಿ ಅವರನ್ನು ಆಶೀರ್ವದಿಸಿದರು.

## ವಿದ್ವದ್ವಲಯದ ಗೌರವ :

ಪರಮಪೂಜ್ಯ ಶ್ರೀ ಜಗದ್ಗುರು ಮರುಳಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳು ಸಂಸ್ಕೃತ ವಿದ್ವಾಂಸರು. ಸಂಸ್ಕೃತ ಭಾಷೆಯಲ್ಲಿ ಪರಮಪೂಜ್ಯರಿಗೆ ಚೆನ್ನಾಗಿ ಗತಿಯುಂಟು. ವಿದ್ವದ್ವಲಯದಲ್ಲಿ ಎಲ್ಲ ವಿದ್ವಾಂಸರೂ ಅವರ ವಿದ್ವತ್ತನ್ನು ಗೌರವಿಸುತ್ತಾರೆ. ೧೯೫೮ರಲ್ಲಿ ಶಕ್ತಿ ವಿಶಿಷ್ಟಾದ್ವೈತ ವೇದಾಂತ ವಿದ್ವತ್ ಪರೀಕ್ಷೆಯನ್ನು ತೇರ್ಗಡೆಮಾಡಿದ ಪರಮಪೂಜ್ಯರು ಚಿತ್ರದುರ್ಗದ ಶ್ರೀ ಸಿದ್ಧೇಶ್ವರ ಪ್ರಸಾದನಿಲಯದಲ್ಲಿ ಸಂಸ್ಕೃತ ಮತ್ತು ವೇದಪಾಠಶಾಲೆಯನ್ನು ಪ್ರಾರಂಭಿಸಿ ಅವುಗಳ ತೂಕವನ್ನು ಹೆಚ್ಚಿಸಿದರು. ತಮ್ಮ ಗುರುಗಳಾದ ಹಿರಿಯ ಜಗದ್ಗುರುಗಳ ಆದೇಶದಂತೆ 'ಜ್ಞಾನಗುರು ವಿದ್ಯಾಪೀಠ'ದ ಕಾರ್ಯಾಧ್ಯಕ್ಷ ಪದವಿಯನ್ನು ಅಲಂಕರಿಸಿ ಉಜ್ಜಯಿನಿ ಶ್ರೀಪೀಠದಿಂದ ಅಲ್ಲಲ್ಲಿ ಪ್ರೌಢಶಾಲೆ, ಸಂಸ್ಕೃತ ಪಾಠಶಾಲೆ ಮತ್ತು ಪ್ರಸಾದನಿಲಯಗಳನ್ನು ಪ್ರಾರಂಭಿಸಿದರು.

## ಸಾಹಿತ್ಯಕ್ಕೆ ಸಹಾಯ :

ಸಾಹಿತ್ಯ ಸೇವೆಯಲ್ಲಿ ಪರಮಪೂಜ್ಯರದು ಎತ್ತಿದ ಕೈ. ಇವರು ಅನೇಕ ಗ್ರಂಥಗಳನ್ನು ಕೇಂದ್ರ ಸರಕಾರದ ಹಾಗೂ ಉದಾರ ದಾನಿಗಳ ಆರ್ಥಿಕ ನೆರವಿನಿಂದ

ಪ್ರಕಟಗೊಳ್ಳುವಂತೆ ಮಾಡಿದ್ದಾರೆ. ಅನೇಕ ಸಂಸ್ಕೃತ ಗ್ರಂಥಗಳನ್ನು ಆಂಗ್ಲ ಹಾಗೂ ಇತರ ಭಾಷೆಗಳಿಗೆ ಅನುವಾದಿಸಲು ವಿದ್ವಾಂಸರನ್ನು ಪ್ರೇರೇಪಿಸಿದ್ದಾರೆ ಮತ್ತು ಪ್ರೋತ್ಸಾಹಿಸಿದ್ದಾರೆ. ಅವುಗಳಲ್ಲಿ ಕೆಲ ಪ್ರಮುಖವಾದವುಗಳನ್ನು ಈ ಕೆಳಗೆ ಕೊಡಲಾಗಿದೆ– ೧) ಈಶ ೨) ಕೇನ ೩) ಮುಂಡಕ ೪) ಸಿದ್ಧಾಂತ ಶಿಖೋಪನಿಷತ್ತು ಇತ್ಯಾದಿಗಳಿಗೆ ವೀರಶೈವ ಸಿದ್ಧಾಂತ ಪರವಾದ ಭಾಷ್ಯ–ಗ್ರಂಥಗಳನ್ನು ಬರೆಯಿಸಿ ಪ್ರಕಟಗೊಳಿಸಿದ್ದಾರೆ. ಬ್ರಹ್ಮಸೂತ್ರ ವೃತ್ತಿ, ಶಾಂಕರೀ ವೃತ್ತಿ, ಶ್ರೀಕರಭಾಷ್ಯ...... ಇತ್ಯಾದಿ ಬೃಹತ್ ಗ್ರಂಥಗಳು ಮೈಸೂರು ವಿಶ್ವವಿದ್ಯಾಲಯದಿಂದ ಪ್ರಕಟಗೊಳ್ಳುವಂತೆ ಮಾಡಿದ್ದಾರೆ.

## ಆಕಾರ ತಳೆದದ್ದು :

ಪರಮಪೂಜ್ಯ ಸನ್ನಿಧಿಯವರು ಇದುವರೆಗೆ ಸಾಕಷ್ಟು ಕೆಲಸ–ಕಾರ್ಯಗಳನ್ನು ಸಮಾಜದ ಹಿತಕ್ಕಾಗಿ ಮತ್ತು ಲೋಕಕಲ್ಯಾಣಕ್ಕಾಗಿ ಮಾಡುತ್ತ ಬಂದಿದ್ದು ಅವುಗಳಲ್ಲಿ ಕೆಲವು ಪ್ರಮುಖವಾದವುಗಳನ್ನು ಇಲ್ಲಿ ಸಂಗ್ರಹಿಸಿಕೊಡಲಾಗಿದೆ.

೧) ಶ್ರೀ ೧೦೦೮ ಜಗದ್ಗುರು ಸಿದ್ಧೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರ ಪರಮಪವಿತ್ರ ಸಂಕಲ್ಪದಂತೆ ೧೯೬೪ರ ಡಿಶೆಂಬರ್ ೧೭ ರಂದು ೧೨೦ ಜನ ಶಿವಾಚಾರ್ಯರು ಮತ್ತು ಪುರೋಹಿತರಿಂದ ೯ ಪಾದಗಳಲ್ಲಿ ಶ್ರೀ ರುದ್ರಪಠಣಜಪವು ೧೧ ದಿನಗಳವರೆಗೆ ನಡೆದು ಶ್ರೀಪೀಠದಲ್ಲಿ ಪೂರ್ಣಾಹುತಿಯನ್ನು ಕೊಡುವುದರ ಮೂಲಕ ಮಹಾಮಂಗಲ ಮಾಡಲಾಯಿತು.

ಈ ಧರ್ಮ–ಸಮಾರಂಭಕ್ಕೆ ಮಾರ್ಗದರ್ಶನ ನೀಡಿ ಆಶೀರ್ವದಿಸಿದ ಶ್ರೇಯ ಪರಮಪೂಜ್ಯ ಜಗದ್ಗುರುಗಳದು. ಈ ಅತಿರುದ್ರ ಜಪದ ಸ್ಮರಣಾರ್ಥ ನಾಲ್ಕು ಲಕ್ಷ ರೂಪಾಯಿಗಳ ಅಂದಾಜಿನ ವೆಚ್ಚದಲ್ಲಿ ಶ್ರೀ ರುದ್ರಮಂಗಲ ಮಂದಿರವನ್ನು ನಿರ್ಮಾಣ ಮಾಡಿ ಆ ಕೆಲಸವನ್ನು ಆಗುಮಾಡಿದ್ದಾರೆ.

೨) ಎರಡು ಮಾಧ್ಯಮಿಕ ಶಾಲೆಗಳನ್ನು, ಒಂದು ಮಹಾವಿದ್ಯಾಲಯದ ಕಟ್ಟಡವನ್ನು ೫ ಲಕ್ಷ ರೂಪಾಯಿಗಳ ವೆಚ್ಚದಲ್ಲಿ ನಿರ್ಮಾಣಮಾಡಿ ಶ್ರೀಶೈಲ ಸನ್ನಿಧಿಯವರಿಂದ ಆ ಕಟ್ಟಡಗಳ ಉದ್ಘಾಟನೆಯನ್ನು ಮಾಡಿಸಲಾಗಿದೆ.

೩) ಅಂಗೀರಸನಾಮ ಸಂವತ್ಸರದಲ್ಲಿ ಶ್ರಾವಣ ಮಾಸದ ಅನುಷ್ಠಾನ ಸಮಾರಂಭದಲ್ಲಿ ಶ್ರೀಮದ್ ಹಿಮವತ್ಕೇದಾರ ಶ್ರೀ ೧೦೦೮ ಜಗದ್ಗುರು ಸಿದ್ಧೇಶ್ವರಲಿಂಗ ಶಿವಾಚಾರ್ಯ ಮಹಾಸ್ವಾಮಿಗಳ ಅಮೃತ ಹಸ್ತದಿಂದ **'ಶ್ರೀ ಉಜ್ಜಯಿನಿ ಸಿಂಹಾಸನ ಗುರುಪರಂಪರೆ'** ಎಂಬ ಗ್ರಂಥವನ್ನು ಉದ್ಘಾಟಿಸಿ ಓದುಗರ ಕೈಗೆ ಕೊಡಲಾಗಿದೆ. ಇದು ಅಲ್ಲದೆ, ಪರಮಪೂಜ್ಯ ಜಗದ್ಗುರುಗಳು ಕರ್ನಾಟಕ, ಮಹಾರಾಷ್ಟ್ರ, ಆಂಧ್ರ ಇತ್ಯಾದಿ ರಾಜ್ಯಗಳ ಪ್ರಮುಖ ಪಟ್ಟಣಗಳಾದ ಬೆಂಗಳೂರು, ತುಮಕೂರು, ಹುಬ್ಬಳ್ಳಿ, ಧಾರವಾಡ, ಪೂನಾ, ನಾಗಪೂರ, ಹೈದ್ರಾಬಾದ...... ಇತ್ಯಾದಿ ಸ್ಥಳಗಳಲ್ಲಿ ಸಂಚರಿಸಿ ಧರ್ಮ–ಜಾಗೃತಿ

ಕಾರ್ಯಕ್ರಮಗಳನ್ನು ಮತ್ತು ಸರ್ವಧರ್ಮ ಸಮ್ಮೇಳನಗಳನ್ನು ಏರ್ಪಡಿಸಿ ಧರ್ಮ–ಜಾಗೃತಿಯನ್ನುಂಟುಮಾಡಿದ್ದಾರೆ. ಜನರಲ್ಲಿ ಶಿವನಿಷ್ಠೆ ಮತ್ತು ಶಿವಭಕ್ತಿನಿಷ್ಠೆಯನ್ನು ಹೆಚ್ಚಿಸಿದ್ದಾರೆ. ಜನರಲ್ಲಿ ಧರ್ಮಪ್ರೇಮ ಹಾಗೂ ವೀರಶೈವ ಸಿದ್ಧಾಂತ ಪ್ರೇಮಗಳು ಹುಟ್ಟಿಕೊಳ್ಳುವಂತೆ ಮಾಡಿದ್ದಾರೆ.

### ಆಕಾರ ತಳೆಯಬೇಕಾದದ್ದು :

ಪರಮಪೂಜ್ಯ ಜಗದ್ಗುರುಗಳು ಈಗಾಗಲೇ ಹತ್ತು ಹಲವು ವಿಧಾಯಕ ಯೋಜನೆಗಳಿಗೆ 'ಹಸಿರು ನಿಶಾನೆ'ಯನ್ನು ತೋರಿಸಿದ್ದು, ಅವರ ಯೋಜನಾ–ಪಟ್ಟಿಯಲ್ಲಿ ಇನ್ನೂ ಹಲವಾರು 'ಯೋಜನಾ–ನಕ್ಷತ್ರ'ಗಳು ಮಿಂಚಿಕೊಂಡಿವೆ. ಅವುಗಳಲ್ಲಿ ಕಾರ್ಯರೂಪಕ್ಕಿಳಿಯಲು ಉತ್ಸುಕವಾಗಿ ನಿಂತುಕೊಂಡಿರುವ ಕೆಲ ಪ್ರಮುಖ ಯೋಜನೆಗಳನ್ನು ಈ ಕೆಳಗೆ ಕೊಡಲಾಗಿದೆ–

೧. ಶ್ರೀಪೀಠದ ಸನಾತನ ಸದ್ಧರ್ಮ ಸಿಂಹಾಸನದ ಜೀರ್ಣೋದ್ಧಾರ ಕಾರ್ಯಕ್ಕೆ ಸಿದ್ಧತೆ.

೨. ಶ್ರೀ ಜಗದ್ಗುರು ಮರುಳಸಿದ್ಧೇಶ್ವರ ದೇವಾಲಯದ ಪ್ರಾಂಗಣದ ಮತ್ತು ಗೋಪುರಗಳ ಪುನರ್ನವೀಕರಣ ಮತ್ತು ಪುನರುತ್ಥಾನ ಕಾರ್ಯ.

೩. 'ಗುರುಪೀಠ–ಯಾತ್ರಾರ್ಥಿ'ಗಳ ನಿವಾಸಕ್ಕಾಗಿ ವಿಶ್ರಾಂತಿ–ಮಂದಿರಗಳ ನಿರ್ಮಾಣ.

೪. ಗ್ರಂಥಾಲಯಗಳ ಕಟ್ಟಡಗಳನ್ನು ಪೂರ್ಣಗೊಳಿಸುವುದು.

೫. ಶಿವಾಗಮಗಳ ಅಧ್ಯಯನ ಸಂಸ್ಥೆಯ ಕಟ್ಟಡ ನಿರ್ಮಾಣ.

೬. ಚಿತ್ರದುರ್ಗ ಜಿಲ್ಲೆಯ ಜಿಗಲೂರು ಮತ್ತು ಬಳ್ಳಾರಿ ಜಿಲ್ಲೆಯ ಕೂಡಲಗಿ ತಾಲ್ಲೂಕು ಕೇಂದ್ರಗಳಲ್ಲಿ ಶ್ರೀ ಜಗದ್ಗುರು ಪಂಚಾಚಾರ್ಯ ಕಲ್ಯಾಣಕೇಂದ್ರ ಹಾಗೂ ಕಲ್ಯಾಣ–ಮಂಟಪದ ನಿರ್ಮಾಣ.

೭. ಬಳ್ಳಾರಿ ಜಿಲ್ಲೆಯ ಕೊಟ್ಟೂರಿನ ಶ್ರೀ ಜಗದ್ಗುರು ದಾರುಕಾಶ್ರಮದಲ್ಲಿ ಏಕೋತ್ತರ ಶತಸ್ಥಲ ಕಟ್ಟಡದ ನಿರ್ಮಾಣ ಕಾರ್ಯವನ್ನು ಪೂರ್ಣಗೊಳಿಸುವುದು.

೮. ವೀರಶೈವ ತತ್ತ್ವಾಧ್ಯಯನ ಸಂಸ್ಥೆಯನ್ನು ಸ್ಥಾಪನೆ ಮಾಡುವುದು ಮತ್ತು ಗುರುಕುಲಗಳನ್ನು ಪ್ರಾರಂಭಿಸುವದು..... ಇತ್ಯಾದಿ.

೯. ಈ ಕೆಳಗಿನ ಕೆಲ ಗ್ರಂಥಗಳನ್ನು ಪ್ರಕಟಿಸಬೇಕೆಂಬ ಉದ್ದೇಶ ಸನ್ನಿಧಿಯವರದಾಗಿದೆ.

ಅ) ಶ್ರೀ ಜಗದ್ಗುರು ಮರುಳಾರಾಧ್ಯ ವಿಜಯ ಪುರಾಣ

ಆ) ಶ್ರೀ ವೀರಶೈವ ಶಿವಾಗಮಗಳ ಪ್ರಕಟಣೆ ..... ಇತ್ಯಾದಿ

ಕಿರಣಾಗಮ ಹಾಗೂ ಮರುಳಾರಾಧ್ಯ ವಿಜಯ ಪುರಾಣ–ಗ್ರಂಥಗಳ ಬಿಡುಗಡೆಯು ಶೀಘ್ರದಲ್ಲಿಯೇ ಆಗಲಿದ್ದು ಅವು ಬೇಗನೆ ವಿದ್ವಾಂಸರ ಮತ್ತು ಬುದ್ಧಿಜೀವಿಗಳ ಕೈಸೇರಲಿವೆ.

## ಅವರೊಂದು 'ಅನುಭವ-ಸಿಂಧು' :

ಪರಮಪೂಜ್ಯ ಸನ್ನಿಧಿಯವರದು ಅತ್ಯಂತ ಸುಸಂಸ್ಕೃತ ಸ್ವಭಾವ. ಅತ್ಯಂತ ಕೋಮಲ ವ್ಯಕ್ತಿತ್ವ ಅವರದು. ಪರಮಪೂಜ್ಯರು ಶಾಂತಮೂರ್ತಿಗಳು. ಅವರೊಂದು ಅನುಭವ-ಸಿಂಧು. ತಮ್ಮ ಪ್ರಭಾವಯುತ ತುಂಬು ತೇಜಸ್ಸಿನಿಂದ ಜನ-ಮನಗಳನ್ನು ತಣಿಸುತ್ತಾರೆ. ಅವರನ್ನು ಕಂಡಾಗ ಸಮಾಧಾನ-ಶಾಂತಿಗಳೇ ಆಕಾರತಳೆದು ಬಂದಂತೆ ಕಾಣುತ್ತವೆ. ಅವರು ಮಾತನಾಡುವುದು ತುಂಬಾ ಕಡಿಮೆ. ಆದರೆ ಆಡಿದ ಪ್ರತಿಯೊಂದು ಮಾತಿಗೂ ಅನುಭವದ ಶ್ರೀಮಂತ ಹಿನ್ನೆಲೆ ಇರುತ್ತದೆ. ಉಳಿದ ಎಲ್ಲ ಪೀಠಾಚಾರ್ಯರು ಅವರ ಹದುಳ ವ್ಯಕ್ತಿತ್ವವನ್ನು ಕಂಡು ಅವರನ್ನು ಹೃದಯ ತುಂಬಿ ಗೌರವಿಸುತ್ತಾರೆ. ಪರಮಪೂಜ್ಯರು ಸಹ ತಮ್ಮ ಸಮಾನ ಪೀಠಾಚಾರ್ಯರಲ್ಲಿ ಅಷ್ಟೇ ಗೌರವ ಹಾಗೂ ಸೌಜನ್ಯ ಭಾವನೆಗಳನ್ನು ತಳೆದು ಅವರನ್ನು ಅಭಿಮಾನಿಸುತ್ತಾರೆ. ಪರಮಪೂಜ್ಯರು ಸಾಕಷ್ಟು ಪಾಂಡಿತ್ಯವನ್ನು ತಮ್ಮ 'ಧೀ ಶಕ್ತಿ'ಯಲ್ಲಿ ಸಂಗ್ರಹಿಸಿಕೊಂಡಿದ್ದರೂ ಅವರ ಮಾತು ಹಾಗೂ ವರ್ತನೆಗಳಲ್ಲಿ ವಿದ್ಯಾಡಂಬರವಿಲ್ಲ. ಅವರ ವಿದ್ವತ್ತು ಪ್ರಶಾಂತವಾಗಿ ತಿಳಿ ತಿಳಿಯಾಗಿ ಜಿಜ್ಞಾಸು-ಮಾನಸದಲ್ಲಿ ಪ್ರವಹಿಸುತ್ತಿರುತ್ತದೆ. ಅವರ ವ್ಯಕ್ತಿತ್ವವನ್ನು ಕಂಡ ಯಾರಾದರೂ ಅವರ ಮುಂದೆ ತಲೆಬಾಗುತ್ತಾರೆ. ಅಪರಿಚಿತರು ಕೂಡ ಪರಮಪೂಜ್ಯರ ಸೌಜನ್ಯಮಯ ವ್ಯಕ್ತಿತ್ವದಿಂದಾಗಿ ಅವರ ಹತ್ತಿರಕ್ಕೆ ಬಂದು ಅವರಲ್ಲಿ ತಮ್ಮ ಗೌರವಾದರಗಳನ್ನು ಅಭಿವ್ಯಕ್ತಗೊಳಿಸುತ್ತಾರೆ ಎಂಬ ಮಾತು ಸತ್ಯವೆಂಬುವುದರಲ್ಲಿ ಎರಡನೆಯ ವಿಚಾರದ ವಾದಕ್ಕೆ ಮತ್ತು ವಿನೋದಕ್ಕೆ ಅವಕಾಶವೇ ಇಲ್ಲ.

|| ೬೦ ||

## ಶ್ರೀಮತ್ ಹಿಮವತ್ಕೇದಾರ ವೈರಾಗ್ಯ ಸಿಂಹಾಸನಾಧೀಶ್ವರ ರಾವಲ್ ಪದವಿಭೂಷಿತ ಪರಮ ಪೂಜ್ಯ ಶ್ರೀ ೧೦೦೮ ಜಗದ್ಗುರು ಶ್ರೀ ಸಿದ್ಧೇಶ್ವರಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು

### ಭಾರತದ ಗೌರವ :

ಹಿಮಾಲಯವೆಂದ ತಕ್ಷಣ ಭಾರತೀಯರ ತಲೆಗಳು ಭಕ್ತಿಯಿಂದ ಬಾಗಿಕೊಳ್ಳತೊಡಗುತ್ತವೆ. ಹಿಮಾಲಯವೇನೂ ದೇವಾಲಯವಲ್ಲ; ಆದರೆ ಅದು ಯಾವುದೇ ಶಿವಾಲಯ, ದೇವಾಲಯಗಳಿಗಿಂತಲೂ ಕಡಿಮೆಯೇನಲ್ಲ. ಭಾರತೀಯರ ಗೌರವ ಹಿಮಾಲಯ! ಭಾರತೀಯರ ಹೆಮ್ಮೆ ಹಿಮಾಲಯ!! ಹಿಮಾಲಯವನ್ನು ನೆನೆದುಕೊಳ್ಳುತ್ತಲೇ ಭಾರತೀಯರ ಅಂತರಿಕವು ಅವ್ಯಕ್ತ ಸ್ಪಂದನೆಗೆ ಒಳಗಾಗುತ್ತದೆ. ಬರೀ ಭಾರತೀಯರಷ್ಟೇ ಅಲ್ಲ, ವಿಶ್ವದ ಪ್ರತಿಯೊಬ್ಬ ಮಾನವನು ಸಹ ಹಿಮಾಲಯಕ್ಕೆ ಬಂದರೆ ಆ ಹಿಮಾಚ್ಛಾದಿತ ಪರ್ವತಶ್ರೇಣಿಗಳಿಗೆ ಪೂಜ್ಯ ಭಾವದಿಂದ ಕರಜೋಡಿಸಿ ವಂದಿಸುತ್ತಾನೆ. ಹಿಮಾಲಯದಲ್ಲಿ ಅಡಿ ಇಟ್ಟರೆ ಸಾಕು; ಪುಣ್ಯವೇ ಬಂದು ಮೈ–ಮನಗಳ ಮೇಲೆ ಸುರಿದುಕೊಳ್ಳುತ್ತದೆ. ಪಾಪವು ಬಹುದೂರದಿಂದಲೇ ಪಲಾಯನಮಾಡುತ್ತದೆ.

### ಇದು ನಮ್ಮ ರಕ್ಷಾ–ಕವಚ :

ಹಿಮಾಲಯವು ಭಾರತೀಯ ಜನಗಳ 'ರಕ್ಷಾ–ಕವಚ' ದಂತಿದೆ. ಭಾರತವನ್ನು ಮತ್ತು ಭಾರತೀಯರನ್ನು ಹೊರ ಹಾಗೂ ಪರನಾಡುಗಳಿಂದ ತೂರಿ ತೂರಿ ಬರುವ ಕೆಟ್ಟ ಗಾಳಿಗಳಿಂದ ಅದು ರಕ್ಷಿಸುತ್ತದೆ. ಭಾರತಕ್ಕೆ ಭೌಗೋಲಿಕ ಸುರಕ್ಷಿತತೆಯನ್ನು ಒದಗಿಸಿಕೊಟ್ಟದೆ ಹಿಮಾಲಯ. ಕೆಟ್ಟದ್ದನ್ನು ಮತ್ತು ಕೆಡುಕನ್ನು ತಾನೇ ಜೀರ್ಣಿಸಿಕೊಂಡು ನಮ್ಮನ್ನು ರಕ್ಷಿಸುತ್ತಲಿದೆ, ಮಮತೆಯ ತಾಯಿಯಂತೆ; ಭಾರತೀಯರ ಭೌತಿಕ ಮತ್ತು ಭಾವನಾತ್ಮಕ ಸಂಪತ್ತನ್ನು ಉಕ್ಕಿನ ಕೋಟೆಯಾಗಿ ನಿಂತು ಪಾಲಿಸುತ್ತಲಿದೆ ಮತ್ತು ಪೋಷಿಸುತ್ತಲಿದೆ ಭಾರತದ ಉತ್ತರ ದಿಕ್ಕಿನಲ್ಲಿ ಕಟ್ಟದ ನೈಸರ್ಗಿಕ ಕೋಟೆ ಹಿಮಾಲಯ!!

### ಬ್ರಹ್ಮಾನಂದವಲ್ಲದೆ ಮತ್ತೇನು?

ಹಿಮಾಲಯದಲ್ಲಿ ಏನಿಲ್ಲ? ಅಲ್ಲಿ ಎಲ್ಲವೂ ಇದೆ. ಅಲ್ಲಿ ಪುಣ್ಯವಿದೆ, ತಪಸ್ಸಿದೆ, ಯೋಗವಿದೆ, ತೇಜಸ್ಸಿದೆ, ಸೌಂದರ್ಯವಿದೆ, ಸುಖವಿದೆ, ಸ್ವಾಸ್ಥ್ಯವಿದೆ. ಏನೆಲ್ಲ ಇದೆ. ಭಾರತೀಯರ ಆಧ್ಯಾತ್ಮಿಕ ವೈಭವದ ಮತ್ತು ಸಾಧನಾ–ಸಿರಿಯ ಮೇರು ಶ್ರೀ

ಹಿಮಾಲಯ !! ಭಾರತದ ಆಧ್ಯಾತ್ಮಿಕ ತಪಸ್ಸೆಲ್ಲ ಹಿಮಾಲಯವನ್ನೇರಿ ಕುಳಿತಿದೆ. ಹಿಮಾಲಯದ ಪರಮಪವಿತ್ರ ಸ್ಪರ್ಶವಾದ ಭೋಗಿ ಯೋಗಿಯಾಗುತ್ತಾನೆ, ಬದ್ಧ ಮುಕ್ತನಾಗುತ್ತಾನೆ. ಮಾನವ ಮನಸ್ಸುಗಳನ್ನೇ ಮಾರ್ಪಡಿಸುವ ಅಲೌಕಿಕ ಶಕ್ತಿ ಹಿಮಾಲಯದಲ್ಲಿದೆ. ಇಲ್ಲಿ ಬಂದವರೆಲ್ಲ ಹಿಮಾಲಯದ ಸಮ್ಮೋಹಿನಿಗೆ ಒಳಗಾಗಲೇಬೇಕು. ಹಿಮಾಲಯವು ತನ್ನಷ್ಟಕ್ಕೆ ತಾನೇ ಒಂದು ಪವಾಡ ಮತ್ತು ಚಮತ್ಕಾರವಿದ್ದಂತಿದೆ. ಈ ಸ್ಥಳದಲ್ಲಿ ಸೌಂದರ್ಯವು ಸೆರೆಹಿಡಿಯಲ್ಪಟ್ಟರೆ ಪುಣ್ಯವು ಸ್ವೇಚ್ಛೆಯಿಂದ ಬಂಧಿಯಾಗಿ ನಿಂತುಕೊಂಡಿದೆ, ಪವಿತ್ರತೆಯು ಬೀಡುಬಿಟ್ಟಿದೆ. ಹಿಮಾಲಯದಲ್ಲಿ ಮುಕ್ತವಾಗಿ ಸಂಚರಿಸುವುದೇ ಬ್ರಹ್ಮಾನಂದ !! ಹಿಮಾಲಯವು ಮನುಷ್ಯನಿಗೆ ಪ್ರಕೃತಿಯ 'ವಿರಾಟ್ ದರ್ಶನ'ವನ್ನು ಮಾಡಿಸುತ್ತದೆ.

## ನಗಾಧಿರಾಜ :

ಹಿಮಾಲಯ ಪರ್ವತವನ್ನು ಕವಿ ಕಾಳಿದಾಸ 'ನಗಾಧಿರಾಜ' (ಪರ್ವತಗಳ ರಾಜ) ಎಂದು ಕರೆದಿದ್ದಾನೆ. ಆತನ ಕಾವ್ಯಗಳಲ್ಲಂತೂ ಹಿಮಾಲಯದ ವರ್ಣನೆಯು ಓತಪ್ರೋತವಾಗಿ ತುಂಬಿಕೊಂಡಿದೆ. ಹಿಮಾಲಯದಲ್ಲಿನ ಹಿಮಾಚ್ಛಾದಿತ ಪರ್ವತ ಶ್ರೇಣಿಗಳು, ಹಿಮಬಂಡೆಗಳು, ಹಿಮಪಾತ, ಹಿಮನದಿ ಎಲ್ಲವೂ ಕಣ್ಣಿಗೆ ಹಬ್ಬವನ್ನು ಮತ್ತು ಮನಕ್ಕೆ ಮುದವನ್ನುಂಟುಮಾಡುತ್ತವೆ. ಹಿಮಾಲಯದಲ್ಲಿರುವುದೆಲ್ಲ ಹಿಮಮಯ! **'ಸರ್ವಂ ಹಿಮಮಯಮಿದಮ್ ಜಗತ್'** ಎಂಬ ಭಾವನೆ ಬಾರದಿರದು. ಆ ಆಕಾಶದ ಎದೆಗೇರಿ ನಿಂತ ಪರ್ವತಶಿಖರಗಳು ಆಕಾಶದ ಯೋಗ್ಯತೆಯನ್ನು ಪ್ರಶ್ನಿಸುತ್ತಿರುವಂತೆ ಭಾಸವಾಗುತ್ತದೆ. ಬಾನ–ಬಾಂದಳದ ರಹಸ್ಯವನ್ನು ಭೇದಿಸಲು ಆಕಾಶಕ್ಕೆ ಲಗ್ಗೆ ಇಟ್ಟಂತೆ ಕಾಣುತ್ತವೆ ಆ ಶಿಖರದ ತಲೆಗಳು. ಆ ಕೈಲಾಸ ಪರ್ವತ, ಆ ಗೌರೀಶಂಕರ.... ಎಲ್ಲವೂ ಸತ್ಯಂ ಶಿವಂ ಸುಂದರಮ್. ಆಕಾಶವನ್ನು ಚುಂಬಿಸುತ್ತಿರುವ ಆ ಪರ್ವತಗಳ ಸುತ್ತಮುತ್ತ ತೇಲಾಡಿಕೊಂಡಿರುವ ಮೋಡಗಳು ಚಿಕ್ಕ ಮಕ್ಕಳ ಹಾಗೆ 'ಕಣ್ಣುಮುಚ್ಚಾಲೆಯಾಟ' ಆಡಿಕೊಂಡಿವೆಯೋ ಏನೋ ಎಂಬಂತೆ ತೋರುತ್ತಿರುತ್ತವೆ.

## ಗಂಗೋತ್ರಿ–ಯಮುನೋತ್ರಿ :

ಗಂಗೆ–ಯಮುನೆಯರ ತಾಯಿ ಹಿಮಾಲಯ. ಅದು ಗಂಗೋತ್ರಿಯೂ ಅಹುದು; ಯಮುನೋತ್ರಿಯು ಅಹುದು. ಈ ಪಾಪಹಾರಿಣಿ ಪುಣ್ಯನದಿಗಳ ಜೈತ್ರಯಾತ್ರೆ ಪ್ರಾರಂಭವಾಗುವುದು ಇಲ್ಲಿಂದಲೇ. ಗಂಗೆ–ಯಮುನೆಯರ ತವರು ಮನೆಯಾದ ಹಿಮಾಲಯವು ಅವರಿಬ್ಬರನ್ನೂ ಆಶೀರ್ವದಿಸಿ ಲೋಕಪಾವನ ಕಾರ್ಯಕ್ಕೆ ಕಳುಹಿಸುತ್ತಿದ್ದಾಳೆ ಎಂಬ ಭಾವ–ಭಾವನೆ ಭಾರತೀಯರ ಭಾವನಾ– ಪ್ರಪಂಚದಲ್ಲಿ ಮನೆಮಾಡಿಕೊಂಡಿದೆ. ಭಗೀರಥನ ಪ್ರಯತ್ನದಿಂದ ಶಿವನ ಜಟಾಮಂಡಲದಿಂದ

ಅವತರಿಸಿದ ದೇವಗಂಗೆ ಮಂದಾಕಿನಿ ಹಿಮಾಲಯದ ಪುಣ್ಯಭೂಮಿಯನ್ನು ಸ್ಪರ್ಶಿಸುತ್ತಲೇ ಮುಂದೆ ಮುಂದೆ ಸಾಗುವಳು, ಭಾರತದ ಮಣ್ಣಿನ ಪುಣ್ಯವನ್ನು ಹೆಚ್ಚಿಸುವುದಕ್ಕಾಗಿ.

## ಯಾವುದು ಪವಿತ್ರವಲ್ಲ? :

ಹಿಮಾಲಯದಲ್ಲಿ ಅದು ಪವಿತ್ರ.... ಇದು ಪವಿತ್ರ..... ಎಂದು ತೋರ್‌ಬೆರಳು ತೋರಿ ತೋರಿಸುವ ಹಾಗೆಯೇ ಇಲ್ಲ. ಅಲ್ಲಿರುವುದೆಲ್ಲವೂ ಪವಿತ್ರವೇ. ಅನೇಕ ಮುನಿ ಮಹಂತರು ತಪಸ್ಸು ಮಾಡಿ ಅದನ್ನು ಸಮಗ್ರವಾಗಿ ಪವಿತ್ರಿಸಿದ್ದಾರೆ. ಹಿಮಾಲಯವು ಋಷಿ–ಮುನಿಗಳ ಬೀಡು. ಸರ್ವಸಂಗ ಪರಿತ್ಯಾಗಿಗಳೇ ಇಲ್ಲಿ ಬಂದಿರಬೇಕು. ಆಸೆ ಆಮಿಷಗಳ ಕಸವನ್ನು ಹೊತ್ತು ಇಲ್ಲಿಗೆ ಬರುವ ಹಾಗಿಲ್ಲ. ಮರಳಿ ಮನೆ ಸೇರಬೇಕೆಂಬ ಇಚ್ಛೆಯನ್ನು ಹೊತ್ತು ಬಂದವರನ್ನು ಹಿಮಾಲಯವು ತನ್ನಲ್ಲಿ ಇಟ್ಟುಕೊಳ್ಳುವುದಿಲ್ಲ; ಕೂಡಲೇ ಅವರು ಅಲ್ಲಿಂದ ಕಾಲ್ತೆಗೆಯುವಂತೆ ಮಾಡುತ್ತದೆ. ಎಲ್ಲವನ್ನೂ ಬಿಟ್ಟವರೇ ಇಲ್ಲಿಗೆ ಬರಬೇಕು. ಬಿಟ್ಟೆನೆಂಬ ಭಾವವನ್ನೂ ಬಿಟ್ಟು ಬರಬೇಕು. ಅಂಥವರನ್ನು ಮಾತ್ರ ಹಿಮಾಲಯವು ತುಂಬು ಹೃದಯದಿಂದ ಸ್ವಾಗತಿಸುತ್ತದೆ. ಹಿಮಾಲಯದ ಆ ಪರಮಪಾವನ ಪರಿಸರವು ಮನುಷ್ಯ ತನ್ನ ಯೋಗ್ಯತೆಯನ್ನು ಪ್ರಶ್ನಿಸಿಕೊಳ್ಳುವಂತೆ ಮಾಡುತ್ತದೆ. ಮಾನವನ ಅಟ್ಟಹಾಸ ಅಹಂಕಾರಗಳ ಅಬ್ಬರಕ್ಕೆ ಅಂಕುಶವನ್ನಿಡುತ್ತದೆ ಹಿಮಾಲಯದ ಆ ಚೇತೋಹಾರಿ ವಾತಾವರಣ. ಮನುಷ್ಯ ತನ್ನ ಕುರಿತು ತಾನು ಬಹಳ ತಿಳಿದುಕೊಂಡಿದ್ದಾನೆ. ಪ್ರಕೃತಿಯ ಮುಂದೆ ಈತನ ಶಕ್ತಿ–ಸಾಮರ್ಥ್ಯಗಳೆಲ್ಲ ವಾಮನ! ಒಂದು ಕ್ಷಣ ಭೂಮಿ ಬರೀ ಕಿಂಚಿತ್ ಮೈ ಝಾಡಿಸಿದರೆ ಸಾಕು: ಗುಡುಗೋ ಮಾತು ಬಿಡಿ; ಕೊಂಚ ನಡುಗಿದರೆ ಸಾಕು, ಈತನ ಸಂಸ್ಕೃತಿ, ಈತ ಕಟ್ಟಿದ ನಗರ, ನಾಗರಿಕತೆ ಎಲ್ಲವೂ ಅಲ್ಲೋಲ–ಕಲ್ಲೋಲವಾಗುತ್ತದೆ. ಸುಮ್ಮನೆ ಪ್ರಕೃತಿ ಸಹಿಸಿಕೊಂಡಿದೆ ಎಂದು ಈತನ ಈ ಎಲ್ಲ ಹಾರಾಟ–ಹೋರಾಟ ನಡೆದಿದೆ ಅಷ್ಟೇ.

## 'ಏರಿ ಏರಿ ಮೇರುವಾಗಿ ನಿಲ್ಲಬೇಕು' :

ಹಿಮಾಲಯವನ್ನು ಬರೀ ನೋಡಿದರೆ ಸಾಲದು. ಅದನ್ನು ಅನುಭವಿಸಬೇಕು. ಅಲ್ಲಿನ ತಂಗಾಳಿಯನ್ನು ಒಮ್ಮೆಯಾದರೂ ನಮ್ಮ ಮೈ–ಮನಗಳು ಸ್ಪರ್ಶಿಸಬೇಕು. ಹಿಮಾಲಯವು ತನ್ನಂತರಂಗದಲ್ಲಿ ಅನಂತ ಚಿದಂಬರ ರಹಸ್ಯಗಳನ್ನು ತುಂಬಿಕೊಂಡಿದೆ. ಅಲ್ಲಿನ ಗುಹೆಗಳಲ್ಲಿ ಸಹಸ್ರಾರು ವರ್ಷಗಳಿಂದ ತಪಸ್ಸು ಮಾಡಿಕೊಂಡಿರುವ ತಪಸ್ವಿಗಳು ಇದ್ದಾರೆ. ಹಿಮಾಲಯದಲ್ಲಿರುವ ಪರ್ವತಗಳಿಗೆ ಕಿವಿಕೊಟ್ಟಾಗ ಗಂಟೆ–ಜಾಗಟೆಗಳ, 'ಓಂಕಾರ'ಗಳ ಧ್ವನಿಯು ಕೇಳಿಬರುತ್ತದೆ. ಹಿಮಾಲಯವು ಯೋಗಿಗಳ ಯೋಗ–ವೇದಿಕೆ, ಸಾಧಕರ ಸಾಧನೆಯ ರಂಗಸಜ್ಜಿಕೆ. ಹಿಮಾಲಯಕ್ಕೆ ಗಟ್ಟಿಗರೇ

ಬರುತ್ತಾರೆ. ಬಂದವರು ಗಟ್ಟಿಯಾಗಿ ಅಲ್ಲಿಯೇ ನೆಲೆನಿಲ್ಲುತ್ತಾರೆ. ಹಿಮಾಲಯಕ್ಕೆ ಬಂದ ಮಿತಪ್ರಜ್ಞರು ಪೂರ್ಣಪ್ರಜ್ಞರಾಗುತ್ತಾರೆ. ಚರಪ್ರಜ್ಞರು ಸ್ಥಿತಪ್ರಜ್ಞರಾಗುತ್ತಾರೆ. ಹಿಮಾಲಯಕ್ಕೆ ಬರಬೇಕಾದರೆ ಏರಿ ಏರಿಯೇ ಬರಬೇಕು. ಕೆಳಗಿನಿಂದ ಮೇಲೆ ಏರಿ ಏರಿ ಬಂದಾಗಲೇ ತಾನೆ ಐಕ್ಯಸ್ಥಿತಿ ಪ್ರಾಪ್ತವಾಗುವುದು! ಏರಬೇಕು, ಮೇಲೇರಬೇಕು. ಏರಿದಾಗಲೇ ಎಲ್ಲವೂ ದೊರೆಯುವದು. ಏರದೇ ಯಾವುದೂ ದೊರೆಯುವುದಿಲ್ಲ.

## ದೇವತಾ–ಮೋಹಿನಿ :

ಪುರಾಣೇತಿಹಾಸಗಳಲ್ಲಿ ಹೇಳಲ್ಪಟ್ಟಿರುವಂತೆ ಹಿಮಾಲಯದಲ್ಲಿ ಸಾಕ್ಷಾತ್ ಶಿವನೇ ವಾಸಮಾಡಿಕೊಂಡಿದ್ದಾನೆ. ಆತನಿರುವುದು ಕೈಲಾಸಪರ್ವತದಲ್ಲಿ. ದೇವಾಧಿ ದೇವತೆಗಳೆಲ್ಲ ಇಲ್ಲಿ ವಿಹರಿಸಿಕೊಂಡಿರುತ್ತಾರೆ. ವಿದ್ಯಾಧರ, ಯಕ್ಷ, ಗಂಧರ್ವ, ಅಪ್ಸರೆಯರು ಇಲ್ಲಿ ಲೋಕಾಭಿರಾಮವಾಗಿ ಅಲೆದುಕೊಂಡಿರುತ್ತಾರೆ. ಮೇಲೆ ಸ್ವಚ್ಛ ನೀಲಾಗಸ, ಹಕ್ಕಿಗಳ ಕಲರವ, ಕೋಗಿಲೆಗಳ ಕೂಗು, ಹರಿವ ನದಿಗಳ ಜುಳು ಜುಳು ನಾದ–ನಿನಾದ, ಬಿಸಿನೀರಿನ ಬುಗ್ಗೆಗಳು, ಸಸ್ಯ–ಸಂಪತ್ತು, ಗಿಡಮೂಲಿಕೆಗಳು, ಕತ್ತರಿಸಿಕೊಂಡು ಕಡಿದುಕೊಂಡು ಬೀಳುವ ಹಿಮಬಂಡೆಗಳು, ಅಬ್ಬಾ! ಇಲ್ಲಿ ಮಾತು ಮೂಕವಾಗುತ್ತದೆ, ಮೈ ಮೈಮರೆಯುತ್ತದೆ, ಮನಸ್ಸು ಉಯ್ಯಾಲೆಯಾಗಿ ತೂಗಾಡುತ್ತದೆ, ಭಾವ ಅರಳುತ್ತದೆ. ಆದ್ದರಿಂದಲೇ ದೇವತೆಗಳು ಲಾಲಾಯಿತರಾಗಿ ದೇವಲೋಕದಿಂದ ಬೇಸತ್ತು ಇಲ್ಲಿಗೆ ಸುತ್ತಾಡಲು ಬರುವುದು !!

## ಜ್ಯೋತಿರ್ಲಿಂಗವಿದು ! :

ಭಾರತದ ದಕ್ಷಿಣದಿಂದ ಉತ್ತರದವರೆಗೆ ಹರಡಿಕೊಂಡಿರುವ ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಒಂದಾದ ಮತ್ತು ಹನ್ನೊಂದನೆಯದಾದ ಕೇದಾರೇಶ್ವರ ಲಿಂಗವು ಹಿಮಾಲಯದಲ್ಲಿದೆ. ಈ ಲಿಂಗವನ್ನು ಕೇದಾರೇಶ್ವರ ಲಿಂಗವೆಂದು ಕರೆಯುತ್ತಾರೆ. ಪ್ರಕೃತಿ ಮತ್ತು ಮಳೆ–ಗಾಳಿಗಳು ಅನುಕೂಲಸಿಂಧುವಾಗಿ ನಿಂತು ಕೊಂಡಿರುವಾಗ ಈ ಶಿವಲಿಂಗ ದರ್ಶನಕ್ಕೆ ದೇಶದ ನಾನಾ ಮೂಲೆಗಳಿಂದ ಪ್ರತಿವರ್ಷವೂ ಸಹಸ್ರಾರು ಯಾತ್ರಿಕರು ಯಾತ್ರಾರ್ಥಿಗಳಾಗಿ ಬಂದು ಈ ಜ್ಯೋತಿರ್ಲಿಂಗದ ದರ್ಶನ ಮಾಡುತ್ತಾರೆ. ಯಾತ್ರಿಗಳು ಇಲ್ಲಿಯ ಲಿಂಗ ದರ್ಶನ ಮಾಡಬೇಕೆಂದರೆ ನಡೆದುಕೊಂಡೇ ಬರಬೇಕು. ಇಲ್ಲಿ ಬರುವುದೇ ಕಷ್ಟ, ಇನ್ನು ಇರುವ ಕಷ್ಟವಂತೂ ಬೇಡವೇ ಬೇಡ ಎನ್ನುವಂತಿದೆ. ಎಷ್ಟೇ ಕಷ್ಟಪಟ್ಟು ಬಂದಾಗಲೂ ಒಮ್ಮೆ ಈ ಶಿವಲಿಂಗದ ದರ್ಶನವಾದರೆ ಸಾಕು, ಮೈ ಹಗುರಾಗುತ್ತದೆ, ದಣಿವು ದೂರ ಓಡುತ್ತದೆ, ಮೈ–ಮನಗಳು ರೋಮಾಂಚನಕ್ಕೆ ಒಳಗಾಗುತ್ತವೆ.

### ಕೈವಲ್ಯ–ಕಾಶ್ಮೀರ !! :

ಹಿಮಾಲಯದಲ್ಲಿರುವುದೆಲ್ಲವೂ ಪವಿತ್ರವೇ ; ಆದರೂ ಕೆಲ ಹೆಸರಿಸಬಹುದಾದ ಪವಿತ್ರ ಸ್ಥಳಗಳಿಲ್ಲಿವೆ. ಓಖೀಮಠ, ಕಲ್ಪೇಶ್ವರ, ಕಾಲೀಶಿಲಾ, ಕಾಲೀಮಠ, ಕೇದಾರನಾಥ, ಗುಪ್ತಕಾಶಿ, ಗೋಪೇಶ್ವರ, ಗೌರೀಕುಂಡ, ತುಂಗನಾಥ, ತ್ರಿಯುಗೀನಾರಾಯಣ, ಮಧ್ಯಮಾಹೇಶ್ವರ, ರುದ್ರಪ್ರಯಾಗ, ಸೋನಪ್ರಯಾಗ.....ಇತ್ಯಾದಿ ಸ್ಥಳಗಳು ತಮ್ಮ ಪವಿತ್ರತೆಯಿಂದಾಗಿ ಸಹಸ್ರಾರು ಜನ ಯಾತ್ರಿಕರನ್ನು ತಮ್ಮತ್ತ ಆಕರ್ಷಿಸುತ್ತವೆ. ಕೇದಾರ–ಯಾತ್ರೆ, ಬದರೀ ಯಾತ್ರೆಗಳಂತೂ ದೇಶದ ತುಂಬೆಲ್ಲ ಪ್ರಸಿದ್ಧವಾಗಿವೆ. ಈ ಎಲ್ಲ ಸ್ಥಳಗಳಿಗೂ ಭಾರತದ ಅನೇಕ ಪುಣ್ಯಾತ್ಮರು ಮಹಾನ್ ವಿಭೂತಿಗಳು ಭೆಟ್ಟಿಕೊಟ್ಟು ಧನ್ಯತೆಯ ಭಾವ ಹೊಂದಿದ್ದಾರೆ. ಶಂಕರಾಚಾರ್ಯರಂಥ ಕಾರುಣಿಕರು ಹಿಮಾಲಯ ಪ್ರಾಂತದಲ್ಲಿಯೇ ತಮ್ಮ ಪಾರ್ಥಿವ ದೇಹವನ್ನು ತೊರೆದು ಮುಕ್ತರಾಗಿದ್ದಾರೆ. ಅಂತಲೇ ಕೇದಾರವು ಭಕ್ತಜನಗಳ, ತಪಸ್ವಿಗಳ, ಸಾಧಕರ, ಸಿದ್ಧರ, ಯೋಗಿಗಳ ಮತ್ತು ಅನುಭಾವಿಗಳ ಕಾಶ್ಮೀರವಾಗಿದೆ. ಬರೀ ಕಾಶ್ಮೀರವಲ್ಲ; ಕೈವಲ್ಯ–ಕಾಶ್ಮೀರವಾಗಿದೆ!!!

### ವೀರಶೈವರ ಹೆಮ್ಮೆ :

ವೀರಶೈವರ ಆರಾಧ್ಯ ಗುರುಪೀಠವೊಂದು ಹಿಮಾಲಯದ ತಲೆಯ ಮೇಲಿದ್ದು ಪರಿಶೋಭಿಸುತ್ತಿರುವುದು ವೀರಶೈವರೆಲ್ಲರೂ ಹೆಮ್ಮೆ ಪಡಬೇಕಾದ ಸಂಗತಿಯೇ ಸರಿ. ಭಾರತದ ಗಡಿ ಪ್ರದೇಶದಲ್ಲಿ ಉತ್ತರ ಭಾರತದ ಉತ್ತರದ ಆ ತುದಿಯಲ್ಲಿ ವೀರಶೈವರ ಧರ್ಮಪೀಠವು ತನ್ನೆಲ್ಲ ಗೌರವ–ಘನತೆಗಳೊಂದಿಗೆ ತಲೆಯೆತ್ತಿ ನಿಂತಿರುವುದನ್ನು ಕಂಡು ಪ್ರತಿಯೊಬ್ಬ ವೀರಶೈವನೂ ಹೆಮ್ಮೆಪಡಬೇಕು. ಆದಿ ಜಗದ್ಗುರುಗಳಾದ ಪಂಚಪೀಠಾಧೀಶ್ವರರು ಸಮಗ್ರ ಭಾರತವನ್ನೇ ತಮ್ಮ ಕಾರ್ಯಕ್ಷೇತ್ರವನ್ನಾಗಿಸಿಕೊಂಡು ಧರ್ಮಸಂಸ್ಥಾಪನೆ ಹಾಗೂ ಧರ್ಮಪ್ರಸಾರಗಳನ್ನು ಮಾಡಿದರು. ಭಾರತವೆಂಬ ಮಹಾಮನೆಯಲ್ಲಿ ಅವರು ತಮಗಿಷ್ಟ ಬಂದಲ್ಲಿ ಸಂಚರಿಸಿ ಧರ್ಮಪ್ರಸಾರ ಮಾಡಿದರು. 'ಇದು ನಮ್ಮದು, ಅದು ನಮ್ಮದಲ್ಲ' ಎಂಬ ಭಾವ ಅವರಲ್ಲಿರಲಿಲ್ಲ. ಎಲ್ಲವೂ ಅವರದೇ ಆಗಿತ್ತು. ಅಂತಲೇ ಭಾರತದ ತುಂಬೆಲ್ಲ ಅವರು ತಮ್ಮ ಪೀಠಗಳನ್ನು ಸ್ಥಾಪಿಸಿದರು. ದಕ್ಷಿಣದ ಈ ತುದಿಯಿಂದ ಉತ್ತರದ ಆ ತುದಿಯವರೆಗಿನ ಆಯಕಟ್ಟಿನ ಸ್ಥಳಗಳಲ್ಲಿ ಅವರು ನೆಲೆನಿಂತು ಜನರು ಧರ್ಮಿಗಳಾಗಿರುವಂತೆ ಪ್ರೇರೇಪಿಸಿದರು ಮತ್ತು ಜನ–ಮನಗಳನ್ನು ರೂಪಿಸಿದರು. ಪ್ರಾಚೀನ ಕಾಲದಿಂದಲೇ ಆಚಾರ್ಯರು ಭಾರತದ ತುಂಬೆಲ್ಲ ಸಂಚರಿಸಿ ಪೀಠ–ಸ್ಥಾಪನೆ ಹಾಗೂ ಧರ್ಮಪ್ರಚಾರ ಮಾಡುತ್ತ ಬಂದಿದ್ದಾರೆ ಎಂಬುವುದಕ್ಕೆ ಈಗಿರುವ ಶ್ರೀಪೀಠಗಳೇ ನಿದರ್ಶನ. ನಮ್ಮ ಆದಿ ಜಗದ್ಗುರುಗಳು ಭಾರತದ ತುಂಬೆಲ್ಲ ಸಂಚರಿಸಿ ವೀರಶೈವ ಧರ್ಮವನ್ನು ರಾಷ್ಟ್ರವ್ಯಾಪಿ ಮತ್ತು ವಿಶ್ವವ್ಯಾಪಿಯನ್ನಾಗಿಸಲು ಪ್ರಯತ್ನಿಸಿದರು. ಅವರ ತಪ

ಪ್ರಭಾವಕ್ಕೆ ಒಳಗಾಗಿ ಅನೇಕ ರಾಜ–ಮಹಾರಾಜರುಗಳು ಅವರ ಅನುಯಾಯಿಗಳಾದರು, ದಾನ–ದತ್ತಿಗಳನ್ನಿತ್ತರು, ಕಿಂಕರರಾಗಿ ಅವರನ್ನು ಸೇವಿಸಿದರು.

## ಯಾಕೀ ಬಂಧನ ? :

ವಿಶ್ವವ್ಯಾಪಿಯಾಗಿರುವ ವೀರಶೈವ ಧರ್ಮವನ್ನು ಕೆಲವೇ ಕೆಲವು ಜನಗಳು ಕೇವಲ ಕರ್ನಾಟಕ ರಾಜ್ಯದ ತಲೆಗೆ ಕಟ್ಟುವ ಶುಷ್ಕ–ಪ್ರಯತ್ನದಲ್ಲಿ ತೊಡಗಿಕೊಂಡಿದ್ದಾರೆ. ವೀರಶೈವ ಧರ್ಮ ಕರ್ನಾಟಕದಲ್ಲಿಯೇ ಹುಟ್ಟಿತು; ವೀರಶೈವ ಸಾಹಿತ್ಯ ಇರುವುದು ಕನ್ನಡದಲ್ಲಿ ಮಾತ್ರ....ಇತ್ಯಾದಿ ಅಭಿಪ್ರಾಯಗಳನ್ನು ಹೊತ್ತು ಹೆತ್ತು ಜನರ ತಲೆಯ ಮೇಲೆ ಹೇರುತ್ತಿರುವ ಜನಗಳು ನಮ್ಮ 'ವಸುಧೈವ ಧರ್ಮ'ವನ್ನು ಕರ್ನಾಟಕ ರಾಜ್ಯ ಮತ್ತು ಅದರ ಸೀಮೆಗಳಿಗೆ ಸೀಮಿತಗೊಳಿಸಿ ವೀರಶೈವ ಜನಗಳ ಮೇಲೆ ಬಹುದೊಡ್ಡ ಉಪಕಾರವನ್ನು ಮಾಡುತ್ತಲಿದ್ದೇವೆ ಎಂಬಂತೆ ವರ್ತಿಸುತ್ತಿರುವುದನ್ನು ಕಂಡು ನಮಗೆ ಆ ಜನಗಳ ದುರ್ಬಲ ಮಾನಸಿಕದ ಕುರಿತು 'ಅಯ್ಯೋ ಪಾಪ!' ಎಂದೆನಿಸುತ್ತಲಿದೆ. ನಿಸ್ಸೀಮವಾಗಿರುವ ನಮ್ಮ ವೀರಶೈವ ಧರ್ಮಕ್ಕೆ ಸೀಮೆಯ ಬಂಧನವೇಕೆ? ವೀರಶೈವ ಧರ್ಮದ ವ್ಯಾಪ್ತಿಯ ಕ್ಷಿತಿಜಕ್ಕೆ ಅಂಕುಶವನ್ನಿಡುವುದೇಕೆ? ಏಕೆ ಈ ತರಲೆ–ತರಾವರಿ ವ್ಯವಹಾರ? ವೀರಶೈವ ಧರ್ಮವನ್ನು ಬರೀ ಕರ್ನಾಟಕದ ತಲೆಗೆ ಕಟ್ಟುತ್ತಿರುವ ಜನಗಳು ಕೆಲಕಾಲ ನಿಂತು ಆಲೋಚಿಸಿ ತಮ್ಮ ಆತ್ಮನಿರೀಕ್ಷಣೆಯನ್ನು ಮಾಡಿಕೊಳ್ಳಬೇಕು. ತಮ್ಮ ಅಭಿಪ್ರಾಯ ಮತ್ತು ಕಿಂವದಂತಿಗಳ ಮರುಪರಿಶೀಲನೆ ಮಾಡಿಕೊಳ್ಳಬೇಕು.

## ಹಿಮ–ಹಿಮಾಲಯದಲ್ಲೊಂದು ವೀರಶೈವ ಧ್ವನಿ :

ಪಂಚಪೀಠಗಳಲ್ಲಿ ಒಂದಾದ ಶ್ರೀಮತ್ ಹಿಮವತ್ಕೇದಾರ ಶ್ರೀಪೀಠವು ವೀರಶೈವರ ಗೌರವವನ್ನು ಹಿಮಾಲಯದಲ್ಲಿ ಹಿಡಿದುನಿಲ್ಲಿಸಿದೆ. ವೀರಶೈವರ 'ಕೀರ್ತಿಧ್ವಜ'ವು ಹಿಮಾಲಯದ ಉತ್ತುಂಗ ಶಿಖರಗಳ ಮೇಲೆ ವಿರಾಜಮಾನವಾಗಿದ್ದು ವೀರಶೈವರೆಲ್ಲರೂ ಎದೆಯೆತ್ತಿ ಹೆಗಲೇರಿಸಿ ನಡೆಯುವಂತೆ ಮಾಡಿದೆ. ಕೇದಾರ ಶ್ರೀಪೀಠವು ಹಿಮಾಲಯದ ಆ 'ಹಿಮ–ಮಹಿಮ' ಪ್ರಾಂತಗಳಲ್ಲಿ ವೀರಶೈವರ ಧ್ವನಿಯನ್ನು ಪ್ರತಿನಿಧಿಸುತ್ತದೆ ಮತ್ತು ವೀರಶೈವರ ಅಸ್ತಿತ್ವವನ್ನು ಪ್ರದರ್ಶಿಸುತ್ತದೆ. ಕೇದಾರ ಶ್ರೀಪೀಠವು ಶ್ರೀಮಂತ ಐತಿಹಾಸಿಕ ಹಿನ್ನೆಲೆಯನ್ನು ಹೊಂದಿದೆ. ಈ ಶ್ರೀಪೀಠದ ಪೀಠಾಚಾರ್ಯರು ಶ್ರೀಪೀಠದ ತಪ, ಯೋಗ, ಧ್ಯಾನ, ಅನುಷ್ಠಾನ ಹಾಗೂ ಆತ್ಮ–ಅಧ್ಯಾತ್ಮ ಸಂಪತ್ತನ್ನು ಹೆಚ್ಚಿಸಿದರೆ ಶ್ರೀಪೀಠದ ಪೀಠಾಚಾರ್ಯರ ಪ್ರಭಾವಕ್ಕೆ ಒಳಗಾದ ರಾಜ–ಮಹಾರಾಜರುಗಳು ಮತ್ತು ರಾಜಮನೆತನಗಳು ಶ್ರೀಪೀಠದ ಆರ್ಥಿಕ ಮತ್ತು ಲೌಕಿಕ ಸಂಪತ್ತನ್ನು ಹೆಚ್ಚಿಸಿದವು. ಈ ಶ್ರೀಪೀಠಕ್ಕೆ ಬಹುದೊಡ್ಡ ಇತಿಹಾಸವಿದೆ. ಇದರ ಪರಂಪರೆ ಭವ್ಯವಾಗಿದೆ. ಶ್ರೀಪೀಠವು ಇದುವರೆಗೆ ೩೨೨ ಪೀಠಾಚಾರ್ಯರನ್ನು, ಅವರ ವ್ಯಕ್ತಿತ್ವವನ್ನು

ಸಾಕ್ಷಿಸಿದ್ದು ಈಗ ಅದು ೩೨೩ನೆಯ ಪೀಠಾಚಾರ್ಯರ ವ್ಯಕ್ತಿತ್ವವನ್ನು ಸಾಕ್ಷಿಸುತ್ತಲಿದೆ. ಈ ಪೀಠದ ಪೀಠಾಚಾರ್ಯರು ಅಖಂಡವಾದ ಭರತ ಖಂಡದ ತುಂಬೆಲ್ಲ ಸಂಚರಿಸಿ ಜನಗಳಿಗೆ ವೀರಶೈವ ಸಿದ್ಧಾಂತಗಳನ್ನು ಬೋಧಿಸಿದರು. ವೀರಶೈವ ತತ್ತ್ವಪ್ರಣಾಳಿಯು ಜನ–ಜನಗಳ ಜೀವವಾಹಿನಿಯಲ್ಲಿ ತುಂಬಿಕೊಂಡಿರುವಂತೆ ಮಾಡಿದರು. ಅಂತರಂಗ–ಬಹಿರಂಗಗಳನ್ನು ಶುದ್ಧೀಕರಿಸಿಕೊಳ್ಳಲು ಜನರಿಗೆ ಕರೆಕೊಟ್ಟರು. ಜನರನ್ನು ಧರ್ಮಾನುರಾಗಿಗಳನ್ನಾಗಿಸಿದರು. ಜನರಲ್ಲಿ ತತ್ತ್ವನಿಷ್ಠೆಯನ್ನು ತುಂಬಿದರು ಮತ್ತು ಅವರಲ್ಲಿ ಧರ್ಮಾಭಿಮಾನವು ಬೆಳೆದುಕೊಳ್ಳುವಂತೆ ಮಾಡಿದರು. ಜನತೆಯ ಹಿತಕ್ಕಾಗಿ ಪರಮ ಪೂಜ್ಯ ಪೀಠಾಚಾರ್ಯರು ದಿನರಾತ್ರಿಗಳನ್ನು ಗಮನಿಸದಷ್ಟು ಏಕಾಗ್ರತೆಯಿಂದ ಪರಿಶ್ರಮಿಸಿದರು. ಅವರ ಪರಿಶ್ರಮ ಫಲಿಸಿತು. ಅವರ ಯತ್ನ–ಪ್ರಯತ್ನಗಳು ಫಲ–ಫಲಾಯಮಾನವಾದವು.

## ಯುಗಯುಗದಲ್ಲಿ :

ಶ್ರೀ ಜಗದ್ಗುರು ಏಕೋರಾಮಾರಾಧ್ಯರು ಕೇದಾರ ಶ್ರೀಪೀಠದ ಆದಿ ಜಗದ್ಗುರುಗಳು. ಇವರು ಶಿವನ ಅಘೋರ ಮುಖಸಂಜಾತರು. ಶಿವನ ಆಣತಿಯಂತೆ ಇವರು ದ್ರಾಕ್ಷಾರಾಮ ಕ್ಷೇತ್ರದ ಶ್ರೀ ರಾಮನಾಥ (ಭೀಮನಾಥ) ನಾಮಾಂಕಿತ ಶಿವಲಿಂಗದಿಂದ ಪ್ರಾದುರ್ಭವಿಸಿದರು. ಶಿವನ ಆದೇಶವೆಂಬ ಮಹಾಮಣಿಹವನ್ನು ಹೊತ್ತು ಬಂದ ಇವರು, ಆಯಾ ಯುಗಗಳಲ್ಲಿ ಬೇರೆ ಬೇರೆ ಅಭಿದಾನಗಳನ್ನು ಹೊಂದಿ ಲೋಕೋದ್ಧಾರ ಕಾರ್ಯವನ್ನು ಮಾಡಿದರು. ಇವರು ಕೃತಯುಗದಲ್ಲಿ ಶ್ರೀ ತ್ರ್ಯಕ್ಷರ ಶಿವಾಚಾರ್ಯರೆಂದು, ತ್ರೇತಾಯುಗದಲ್ಲಿ ಶ್ರೀ ತ್ರಿವಕ್ತ್ರ ಶಿವಾಚಾರ್ಯರೆಂದು, ದ್ವಾಪರಯುಗದಲ್ಲಿ ಶ್ರೀ ಘಂಟಾಕರ್ಣ ಶಿವಾಚಾರ್ಯರೆಂದು ಮತ್ತು ಕಲಿಯುಗದಲ್ಲಿ ಶ್ರೀ ಏಕೋರಾಮಾರಾಧ್ಯ ಶಿವಾಚಾರ್ಯರೆಂದು ಖ್ಯಾತರಾಗಿ ವೀರಶೈವ ಧರ್ಮದ 'ಕೀರ್ತಿಕೇತು'ವು ದಶದಿಕ್ಕುಗಳಲ್ಲೂ ವಿಜೃಂಭಿಸುವಂತೆ ಮಾಡಿದರು. ಜಗದ್ಗುರು ಏಕೋರಾಮಾರಾಧ್ಯರು ಭಾರತದ ಹಿಮಾಲಯದಲ್ಲಿ ಒಂದು ಪೀಠವನ್ನು ಸ್ಥಾಪಿಸಿ ಅದನ್ನು '**ಕೇದಾರ ಪೀಠ**'ವೆಂದು, '**ವೈರಾಗ್ಯ ಸಿಂಹಾಸನ**'ವೆಂದು ಕರೆದರು.

## ವೈರಾಗ್ಯ ಸಿಂಹಾಸನ :

ಹೌದು, ಹಿಮಾಲಯದ ಪರ್ವತಪ್ರಾಂತದಲ್ಲಿ ಸ್ಥಾಪಿಸಿದ ಪೀಠವು ವೈರಾಗ್ಯ ಪೀಠವಲ್ಲದೆ ಮತ್ತೊಂದಾಗಿರಲು ಸಾಧ್ಯವೇ? ಹಿಮಾಲಯದಲ್ಲಿರುವವರಿಗೆಲ್ಲ ವೈರಾಗ್ಯವೇ ಆಸ್ತಿ. ಎಲ್ಲವನ್ನೂ ಬಿಟ್ಟು ಬರುವವರಿಗೆ ಮಾತ್ರ ಅಲ್ಲಿ ಸ್ವಾಗತವಿದೆ. ಹಿಮಾಲಯದಲ್ಲಿ ಸಂಪತ್ತು, ದೌಲತ್ತು ಯಾವುದೂ ಬೇಡ. ಇವೆರಡೂ ಇಲ್ಲವೆಂದ ಮೇಲೆ ಆ ಪೀಠಕ್ಕೆ ವಿಪತ್ತು, ಆಪತ್ತು ಬರುವ ಪ್ರಶ್ನೆಯೇ ಇಲ್ಲ. ವೈರಾಗ್ಯಧಾರಣ ಮಾಡಿದ ಮೇಲೆ

ವಿದ್ವತ್ತು ಮತ್ತು ಅದರ ಬೌದ್ಧಿಕ ಕಸರತ್ತು ಬೇಕಿಲ್ಲ. ವೈರಾಗ್ಯವೆಂದರೆ ಬರೀ ವೈರಾಗ್ಯ, ಸ್ವಚ್ಛ ನಿಸ್ಪೃಹತೆ! ಪ್ರಪಂಚದಲ್ಲಿರುವ ಎಲ್ಲ ಪದ–ಪದಾರ್ಥಗಳು ಭಯ–ಯುಕ್ತವಾಗಿರುವಾಗ ಭಯಮುಕ್ತವಾಗಿರುವುದು ವೈರಾಗ್ಯವೊಂದೇ. ಈ ಆಸ್ತಿಯನ್ನು ಯಾರೂ ಕದಿಯುವದಿಲ್ಲ, ಕೊಳ್ಳೆ ಹೊಡೆಯುವುದೂ ಇಲ್ಲ. ಕಾಷಾಯಾಂಬರಧಾರಿಗಳಾಗಿ, ಮಣಿಗಳನ್ನೆಳೆಯುತ್ತ ತಮ್ಮನ್ನೇ ತಾವು ಮರೆತು ಚಿನ್ಮಯನಲ್ಲಿ ತನ್ಮಯರಾಗಿರುವವರ ಬಳಿ ಯಾರು ತಾನೆ ಬರಬೇಕು? ಇದನ್ನೆಲ್ಲ ಅರಿತೇ ಪರಮಪೂಜ್ಯ ಜಗದ್ಗುರು ಶ್ರೀ ಏಕೋರಾಮಾರಾಧ್ಯರು ವೈರಾಗ್ಯ ಸಿಂಹಾಸನವನ್ನು ಆರೋಹಣ ಮಾಡಿದರು. ಕೇದಾರ ಶ್ರೀಪೀಠವು ಕೇದಾರ ಮಠ, ವೈರಾಗ್ಯ ಪೀಠ, ಶ್ರೀಹಿಮವತ್ಕೇದಾರ ಪೀಠ, ವೈರಾಗ್ಯ ಸಿಂಹಾಸನ...... ಇತ್ಯಾದಿ ಹೆಸರುಗಳಿಂದ ಕರೆಯಲ್ಪಡುತ್ತದೆ. ಈ ಶ್ರೀಪೀಠದ ಪೀಠಾಚಾರ್ಯರು 'ವೈರಾಗ್ಯ ಸಿಂಹಾಸನಾಧೀಶ್ವರ'ರೆಂದು ಗುರುತಿಸಲ್ಪಡುತ್ತಾರೆ.

### 'ಬಾನಿನಂದದಿ ವ್ಯಾಪಕವಾಗಲಿ ಭಾವ–ಭಾವನೆಗಳು' :

ಈ ಶ್ರೀಪೀಠದ ಪೀಠಾಚಾರ್ಯರು ಕೈಯಲ್ಲಿ ವೇಣುದಂಡವನ್ನು, ಲೋಖಂಡ ವರ್ಣದ ಕಮಂಡಲುವನ್ನು ಮತ್ತು ನೀಲವರ್ಣದ ಧ್ವಜವನ್ನು ಹಿಡಿದು ದೇಶಸಂಚಾರ ಮಾಡುತ್ತಾರೆ. ನೀಲವರ್ಣವು ಆಕಾಶದತ್ತ ತನ್ನ ಗಮನವನ್ನು ಕೇಂದ್ರೀಕರಿಸಿದೆ. ಸ್ವಚ್ಛ ಹಾಗೂ ನಿರಭ್ರ ಆಕಾಶದ ಬಣ್ಣವೂ ಸಹ ನೀಲ. ನೀಲವರ್ಣವನ್ನು ಪ್ರತಿನಿಧಿಸುವ ಮೂಲಕ ಪರಮಪೂಜ್ಯರ ಧ್ವಜವು ಆಕಾಶದಂತೆ ನಮ್ಮ ಮನ–ಭಾವಗಳು ವ್ಯಾಪಕಗೊಳ್ಳಬೇಕು; ನಮ್ಮ ಭಾವ–ಭಾವನೆಗಳು ಅಂತವಿಲ್ಲದ ಆಕಾಶದ ಹಾಗೆ ಅನಂತವಾಗಬೇಕು. ನಮ್ಮ ಹೃದಯಗಳು ಅರಳಿ ನಿಂತುಕೊಳ್ಳಬೇಕು.. ಆಕಾಶವು ಎಲ್ಲರಿಗೂ ಅವಕಾಶ ಕೊಡುವಂತೆ ; ಆದರೆ ಯಾವುದನ್ನೂ ತಾನು ಅಂಟಿಸಿಕೊಳ್ಳದಿರುವಂತೆ ನಮ್ಮ ವ್ಯಕ್ತಿತ್ವವು ಕೂಡ ನಿರಂಜನವಾಗಿ ನಿರ್ಲಿಪ್ತವಾಗಿ ಇರಬೇಕು. ನೀಲವರ್ಣ ಧ್ವಜದ ಮೂಲಕ ಈ ಶ್ರೀಪೀಠದ ಪೀಠಾಚಾರ್ಯರು ನಮ್ಮ ವ್ಯಕ್ತಿತ್ವವನ್ನು ಮತ್ತು ಭಾವ–ಭಾವನೆಗಳನ್ನು ಹಿಗ್ಗಿಸಿಕೊಳ್ಳಲು, ಅನಂತಿಸಿಕೊಳ್ಳಲು ಕರೆಕೊಡುತ್ತಾರೆ. ವ್ಯಕ್ತಿತ್ವವನ್ನು 'ಆಕಾಶವತ್' ನಿಸ್ಸೀಮಗೊಳಿಸಿಕೊಳ್ಳಲು ಪ್ರೋತ್ಸಾಹಿಸುತ್ತಾರೆ ಈ ಪೀಠದ ಪೀಠಾಚಾರ್ಯರು.

ಕೇದಾರ ಶ್ರೀಪೀಠದ ಪೀಠಾಚಾರ್ಯರು ಪಂಚ ಮಹಾಭೂತಗಳಲ್ಲೊಂದಾದ ಅಗ್ನಿತತ್ತ್ವದ ಅಧಿಪತಿಗಳು. ವೇದಾಗಮ ಉಪನಿಷತ್ತುಗಳ ಸಾರಸರ್ವಸ್ವವನ್ನು ಅಭ್ಯಸಿಸಿದ ಇವರದು 'ಗಾನವೇದ'ವೆಂದೇ ಪ್ರಸಿದ್ಧವಾದ ಸಾಮವೇದ ಪರಂಪರೆ. ಪಂಚಾಕ್ಷರ ಮಹಾಮಂತ್ರದಲ್ಲಿಯ 'ಶಿ'ಕಾರ ಇವರ ಬೀಜಮಂತ್ರ. ಶಿವನ ಪ್ರಮಥ ಗಣರಲ್ಲೊಬ್ಬನಾದ ಮತ್ತು ಶಿವನಿಷ್ಠೆಗೆ ಹೆಸರುವಾಸಿಯಾದ ಭೃಂಗಿಯು ಕೇದಾರ ಶ್ರೀಪೀಠದವರ ಗೋತ್ರಪುರುಷ. ಆದ್ದರಿಂದ ಕೇದಾರ ಶ್ರೀಪೀಠಕ್ಕೆ ಸಂಬಂಧಪಟ್ಟವರೆಲ್ಲ ತಾವು ಭೃಂಗಿ–ಗೋತ್ರಜರೆಂದು ಹೇಳಿಕೊಳ್ಳಬೇಕು. ಈ ಶ್ರೀಪೀಠದ ಭಕ್ತರು 'ಲಂಬನ

ಸೂತ್ರ'ಕ್ಕೆ ಒಳಪಡುತ್ತಾರೆ. ಘಂಟಾಕರ್ಣರನ್ನು ಗಣಾಧೀಶ್ವರರನ್ನಾಗಿ ಪಡೆದ ಈ ಶ್ರೀಪೀಠದ ಭಕ್ತರೆಲ್ಲರೂ ಘಂಟಾಕರ್ಣ ಶಾಖೆಗೆ ಸೇರಿದವರಾಗಿರುತ್ತಾರೆ. ಶ್ರೀಪೀಠವು ವೈರಾಗ್ಯಪೀಠವಾಗಿರುವುದರಿಂದ ಇಲ್ಲಿ ರಾಗ– ಅನುರಾಗಗಳ ಮಾತೇ ಇಲ್ಲ. ಏನಿದ್ದರೂ ಇಲ್ಲಿ ಕೇವಲ ವಿರಾಗ ಮತ್ತು ವಿರಕ್ತಿ ಮಾತ್ರ.

## ಮಾಂಧಾತಾ ಚ ಮಹೀಪತಿ:...... :

ಕೃತಯುಗದಲ್ಲಿ ಜಗದ್ಗುರು ಶ್ರೀ ತ್ರ್ಯಕ್ಷರ ಶಿವಾಚಾರ್ಯರು ಕೇದಾರ ಶ್ರೀಪೀಠದ ಪೀಠಾಧೀಶ್ವರರಾಗಿದ್ದರು. ಮಹಾಮಹಿಮಾಶಾಲಿಗಳಾದ ಇವರ ಪ್ರಭಾವವು ದಿಶೆ ದಿಶೆಗಳಲ್ಲೂ ತುಂಬಿಕೊಂಡಿತ್ತು. ಜನರು ಇವರ ತಪಶ್ಶಕ್ತಿಗೆ ತಮಗರಿಯದಂತೆ ತಾವಾಗಿಯೇ ಪ್ರಭಾವಿತರಾಗುತ್ತಿದ್ದರು. ನೃಪಶ್ರೇಷ್ಠರು ಪರಮಪೂಜ್ಯರ ದರ್ಶನಾಶೀರ್ವಾದಗಳನ್ನು ಪಡೆಯಲು ಸೆರಗೊಡ್ಡಿ ಕೈಮುಗಿದು ನಿಲ್ಲುತ್ತಿದ್ದರು. ಅವರಲ್ಲಿ ಸೂರ್ಯವಂಶದ ಮಾಂಧಾತ ಚಕ್ರವರ್ತಿಯೂ ಒಬ್ಬ. ಸೂರ್ಯವಂಶದ ಈ ಚಕ್ರವರ್ತಿಯ ವ್ಯಕ್ತಿತ್ವವು ಕೃತಯುಗಕ್ಕೇ ಅಲಂಕಾರಪ್ರಾಯವಾಗಿತ್ತು. ಪರಮಪೂಜ್ಯ ಜಗದ್ಗುರುಗಳು ಈತನನ್ನು ತಮ್ಮ ಶಿಷ್ಯನನ್ನಾಗಿ ಸ್ವೀಕರಿಸಿ ಈತನಿಗೆ ವೀರಶೈವ ಮಹಾ ಮತದ ತತ್ತ್ವೋಪದೇಶ ಮಾಡಿದರು. ಈತ ಪರಮ ಗುರುಭಕ್ತನಾಗಿ ಗುರುಗಳ ಅಂತೇವಾಸಿಯಾಗಿದ್ದುಕೊಂಡು (ಬಳಿಯೇ ಇದ್ದು) ತನ್ನ ಅಂತ್ಯಕಾಲದಲ್ಲಿ ಗುರುಸೇವೆ ಮಾಡುತ್ತ ಗುರುಸ್ಥಾನದಲ್ಲಿಯೇ ದೇಹಬಿಟ್ಟು ಲಿಂಗೈಕ್ಯನಾದ, ಶಿವಸಾಯುಜ್ಯವನ್ನು ಪಡೆದ. ಮಾಂಧಾತ ಚಕ್ರವರ್ತಿಯ ಶಿಲಾವಿಗ್ರಹವು ಈಗಲೂ 'ಓಖೀಮಠ'ದಲ್ಲಿರುವುದನ್ನು ಕಾಣಬಹುದಾಗಿದೆ.

## ಓಹೋ, ಆ ವ್ಯಾಸರಿಗೂ ಗುರುಗಳುಂಟೇ ! ? :

ದ್ವಾಪರ ಯುಗದಲ್ಲಿ ಶ್ರೀಪೀಠದ ಮೇಲೆ ವಿರಾಜಮಾನರಾಗಿದ್ದ ಶ್ರೀ ಜಗದ್ಗುರು ಘಂಟಾಕರ್ಣ ಶಿವಾಚಾರ್ಯರು ಪುರಾಣೇತಿಹಾಸ ಪ್ರಸಿದ್ಧನಾದ ಅಲ್ಲ, ಪುರಾಣೇತಿಹಾಸ ಬ್ರಹ್ಮನಾದ ವ್ಯಾಸ ಮಹರ್ಷಿಗೆ ವೀರಶೈವ ಧರ್ಮಬೋಧೆಯನ್ನು ಮಾಡಿ ವೀರಶೈವ ಸಿದ್ಧಾಂತವನ್ನು ಪರಿಚಯಿಸಿದರು. ವ್ಯಾಸರೇ ಎಲ್ಲರಿಗೂ ಗುರುಗಳಾಗಿರುವಾಗ ಅವರಿಗೊಬ್ಬ ಗುರುಗಳಿದ್ದಾರೆಂದರೆ ಇದು ಆಶ್ಚರ್ಯಪಡಬೇಕಾದ ಸಂಗತಿಯೇ ಹೌದು. 'ವ್ಯಾಸೋಚ್ಛಿಷ್ಟಂ ಜಗತ್ ಸರ್ವಮ್' ಎಂಬ ಕೀರ್ತಿಗೆ ಪಾತ್ರರಾಗಿದ್ದಾರೆ ವ್ಯಾಸರು. ಸ್ವತಃ ಗಣೇಶನೇ ಅವರಿಗೆ ತನ್ನ ಲೆಕ್ಕಣಿಕೆಯ ಸೇವೆಯನ್ನು ಸಲ್ಲಿಸಿದ್ದಾನೆ. ಹಿಗ್ಗಿಸಿದಷ್ಟೂ ಹಿಗ್ಗುತ್ತದೆ ವ್ಯಾಸರಲ್ಲಿನ ಜ್ಞಾನರಾಶಿ. ವ್ಯಾಸರ ಜ್ಞಾನದ ವ್ಯಾಸ ಇಷ್ಟು, ಇಂತಿಷ್ಟೆಂದು ಅಳೆಯಲಿಕ್ಕೆ ಆಗದು. ವ್ಯಾಸರು ಸಾಮಾನ್ಯರಲ್ಲ; ಅಸಾಮಾನ್ಯರು! ಅಂಥ ವ್ಯಾಸರಿಗೆ ವೀರಶೈವ ತತ್ತ್ವೋಪದೇಶ ಮಾಡುವ ಮೂಲಕ ಅವರನ್ನುದ್ಧರಿಸಿದ

ಗೌರವ ನಮ್ಮ ಪೀಠಾಚಾರ್ಯರದು. ಸ್ವತಃ ವ್ಯಾಸನೇ ಜಗದ್ಗುರುಗಳ ಯೋಗ್ಯತೆಯನ್ನು ಒಪ್ಪಿಕೊಂಡು ಅವರನ್ನು ತನ್ನ ಗುರುವೆಂದು ಸ್ವೀಕರಿಸಿದ್ದಾನೆಂದರೆ ಆ ಗುರುಗಳ ಗುರುತ್ವಕ್ಕೆ ಎಂಥ ಗುರುತ್ವಾಕರ್ಷಣ ಶಕ್ತಿ ಇರಬೇಕೆಂಬುದು ಅನೂಹನೀಯವೇ ಆಗಿದೆ.*

## ಉಷಾಮಠ–ಓಖೀಮಠ :

**ಅಂದಿನ ಉಷಾಮಠವೇ ಇಂದಿನ ಓಖೀಮಠ.** ಕೇದಾರ ಶ್ರೀಪೀಠವಿರುವುದು ಈ ಓಖೀಮಠದಲ್ಲಿಯೇ. ಈ ಓಖೀಮಠವು ಉತ್ತರ ಪ್ರದೇಶದ ಚಮೋಲಿ ಜಿಲ್ಲೆಯಲ್ಲಿದೆ. ಇಂದು ಓಖೀಮಠವು ಒಂದು ಊರೆಂದು ಗುರುತಿಸುವಂತಾಗಿದೆ. ಈ ಮಠವು ಮೊದಲು ಮೊದಲು ಉಷಾಮಠವೆಂದು, ನಂತರ ಊಖಾಮಠವೆಂದು, ಈಗ ಓಖೀಮಠವೆಂದು ಕರೆಯಲ್ಪಡುತ್ತಲಿದೆ. ಕೇದಾರ ಶ್ರೀಪೀಠಾಧೀಶ್ವರರು ಧರ್ಮಜಾಗೃತಿ ಯಾತ್ರೆಯಲ್ಲಿರದಾಗ ವರುಷದ ಬಹುಪಾಲು ಸಮಯವನ್ನು ಈ ಮಠದಲ್ಲಿಯೇ ಕಳೆಯುತ್ತಾರೆ.

ಕುಮಾರಿ ಉಷಾದೇವಿಯು ರಾಕ್ಷಸರಾಜ ಬಾಣಾಸುರನ ಮಗಳು. ಅವಳಿಗೆ ಚಿಕ್ಕಂದಿನಿಂದಲೂ ಈ ಶ್ರೀಪೀಠದ ಆಚಾರ್ಯರ ಮೇಲೆ ತುಂಬಾ ಗೌರವ ಮತ್ತು ಆದರ. ಅವಳು ತನ್ನ ಬಾಲ್ಯವನ್ನೆಲ್ಲ ಶ್ರೀಪೀಠದಲ್ಲಿದ್ದುಕೊಂಡೇ ಕಳೆದಳು. ಶ್ರೀಪೀಠದ ಪೀಠಾಚಾರ್ಯರ ಮಾರ್ಗದರ್ಶನದಲ್ಲಿಯೇ ಅವಳು ಸಕಲಶಾಸ್ತ್ರಗಳ ಅಧ್ಯಯನವನ್ನು ಮಾಡಿದಳು. ಉಷಾದೇವಿ ಪೀಠಾಚಾರ್ಯರ ಅನುಗ್ರಹದಿಂದಾಗಿ ಪರಿಪೂರ್ಣ ಪಂಡಿತೆಯಾದಳು. ಮುಂದೆ ಇವಳ ಮದುವೆಯು ಅನಿರುದ್ಧನ ಜೊತೆಗಾಯಿತು. ಉಷಾದೇವಿಯು ಗಂಡನ ಮನೆ ಸೇರಿದರೂ ಅವಳ ಪೀಠಾಭಿಮಾನ ಮತ್ತು ಪೀಠಪ್ರೇಮ ಬಾಡಲಿಲ್ಲ. ಅವಳು ಆಗಾಗ್ಗೆ ಪತಿಯ ಜೊತೆ ಗುರುಪೀಠಕ್ಕೆ ಬರುತ್ತಿದ್ದು ಗುರುಸೇವೆ ಮತ್ತು ಅಧ್ಯಯನದಲ್ಲಿ ತೊಡಗಿಕೊಂಡಿರುತ್ತಿದ್ದಳು. ತನ್ನ ಆರಾಧ್ಯ ಗುರುದೇವರ ಆವಾಸಕ್ಕಾಗಿ ಅವಳು ಒಂದು ಭವ್ಯವಾದ ಮಠವನ್ನು ಕಟ್ಟಿಸಿದಳು ಮತ್ತು ಗುರುಗಳ ಅಡಿದಾವರೆಗಳಲ್ಲಿ ಕೃತಜ್ಞತಾ ಭಾವದಿಂದ ಆ ಶ್ರೀಮಠವನ್ನು ಅರ್ಪಿಸಿದಳು. ಅವಳ ಸಂಕಲ್ಪದಂತೆ ನಿರ್ಮಿಸಲ್ಪಟ್ಟು, ಅವಳಿಂದ ಗುರುಗಳಿಗೆ ಅರ್ಪಿಸಲ್ಪಟ್ಟ ಆ ಶ್ರೀಮಠವು ಅವಳ ಹೆಸರಿನಿಂದಲೇ ವಿಖ್ಯಾತವಾಯಿತು. ಕಾಲಾಂತರದಲ್ಲಿ ಅದು ಅಪಭ್ರಂಶದ ಹಾವಳಿಗೆ ಸಿಕ್ಕು ಈಗ 'ಓಖೀಮಠ'ವಾಗಿ ನಿಂತುಕೊಂಡಿದೆ.

---

* ಕಾಶೀಖಂಡದ 95ನೇ ಅಧ್ಯಾಯದಲ್ಲಿಯ 68–69ನೆಯ ಶ್ಲೋಕಗಳಿಂದ ಈ ವಿಷಯವು ತಿಳಿದು ಬರುತ್ತದೆ. ವ್ಯಾಸಕಾಶಿಯಲ್ಲಿರುವ 'ವ್ಯಾಸೇಶ್ವರ' ಮಂದಿರದಲ್ಲಿ ಇಷ್ಟಲಿಂಗವನ್ನು ಅಂಗೈಯಲ್ಲಿ ಹಿಡಿದು ಲಿಂಗಪೂಜೆ ಮಾಡುತ್ತಿರುವ ಘಂಟಾಕರ್ಣ ಶಿವಾಚಾರ್ಯರ ಶಿಲಾಮೂರ್ತಿಯು ಈಗಲೂ ಇದೆ.

## 'ಕೇಳು ಜನಮೇಜಯ'ನ ಗುರುಗಳು :

ಕೇದಾರ ಶ್ರೀಪೀಠದ ಶ್ರೀಪರಂಪರೆಯನ್ನು ಅನೇಕ ತಪಸ್ವಿಗಳು, ಯೋಗಿಗಳು, ಸಿದ್ಧ–ಪ್ರಬುದ್ಧ ಮಹಂತರು, ಶ್ರೀಸಂಪನ್ನರು ಶ್ರೀಮಂತಿಸಿದ್ದಾರೆ. ಈ ಶ್ರೀಪೀಠವು ಅನೇಕ ಮಹಿಮಾಶಾಲಿ ಪೀಠಾಚಾರ್ಯರ ಪವಿತ್ರ ಸಂಕಲ್ಪದಿಂದ ಪ್ರಸನ್ನವಾಗಿದೆ. ಅರಸು–ಮನೆತನಗಳು ಕೇದಾರ ಶ್ರೀಪೀಠದ ಹಾಗೂ ಪೀಠಾಚಾರ್ಯರ ಸೇವೆಯನ್ನು ಮಾಡಲು ಮತ್ತು ಅವರಿಗೆ ತಮ್ಮ ಭಕ್ತಿಸೇವೆಯನ್ನು ಅರ್ಪಿಸಲು ಸರತಿಯಲ್ಲಿ ನಿಂತುಕೊಂಡಿರುತ್ತಿದ್ದವು. ಶ್ರೀಪೀಠದ ಸನ್ನಿಧಿಗಳ ಪ್ರಭಾವವು ಹಿಮಾಲಯವನ್ನೇ ಹಿತವಾದ ರೋಮಾಂಚನಕ್ಕೆ ಒಳಗುಮಾಡಿತ್ತು. ಕೇದಾರ ಶ್ರೀಪೀಠಾಧೀಶ್ವರರಾದ ಜಗದ್ಗುರು ಆನಂದಲಿಂಗ ಶಿವಾಚಾರ್ಯರು ಶ್ರೀಪೀಠದ ಇತಿಹಾಸದಲ್ಲಿ ಸಶಕ್ತ ಭೂಮಿಕೆಯನ್ನು ನಿರ್ವಹಿಸಿ ಶ್ರೀಪೀಠದ ಶ್ರೇಯಸ್ಸನ್ನು ಉತ್ತರೋತ್ತರವಾಗಿ ಎತ್ತರಿಸಿದರು. ಅರ್ಜುನಪುತ್ರ–ಅಭಿಮನ್ಯುವಿನ ಮೊಮ್ಮಗ ಹಾಗೂ ಪರೀಕ್ಷಿತ ಮಹಾರಾಜನ ಮಗನಾದ ಭರತಕುಲಶ್ರೇಷ್ಠ ಜನಮೇಜಯ ಮಹಾರಾಜನು ಜಗದ್ಗುರು ಆನಂದಲಿಂಗ ಶಿವಾಚಾರ್ಯರ ಅಡಿದಾವರೆಗಳಲ್ಲಿ ಅನನ್ಯ ಭಕ್ತಿಯಿಂದ ಶರಣಾಗತನಾಗಿದ್ದ. ಜಗದ್ಗುರು ಆನಂದಲಿಂಗ ಜಂಗಮ ಶಿವಾಚಾರ್ಯರಿಗೆ ಆತ ತನ್ನದೆನ್ನುವುದೆಲ್ಲವನ್ನೂ ಅರ್ಪಿಸುವುದಕ್ಕೆ ಸಿದ್ಧನಾಗಿದ್ದ. ಆತ ಅನನ್ಯ ಭಕ್ತಿಯಿಂದ ಶ್ರೀಪೀಠದ ಪೀಠಾಚಾರ್ಯರಿಗೆ ತನ್ನ ಆಡಳಿತದಲ್ಲಿರುವ ಸಮಗ್ರ ಕೇದಾರಕ್ಷೇತ್ರವನ್ನು ದಾನವಾಗಿ ಕೊಟ್ಟು ತನ್ನ ಗುರುಪ್ರೇಮದ ಪರಾಕಾಷ್ಠೆಯನ್ನು ತೋರಿದ. ಆತನ ದಾನ–ವಿವರಗಳನ್ನು ದಾಖಲಿಸಿಕೊಂಡ ತಾಮ್ರ–ಶಾಸನಗಳು ಈಗಲೂ ಶ್ರೀಪೀಠದ ಐತಿಹಾಸಿಕ ಪುಟಗಳಲ್ಲಿ ಜೋಪಾನವಾಗಿ ಕಾಯ್ದಿರಿಸಲ್ಪಟ್ಟಿವೆ.

## ಅದ್ಭುತ–ಸಂಪತ್ತು ಮತ್ತು ಶಿಷ್ಯ–ಸಂಪತ್ತು!! :

ಈ ಶ್ರೀಪೀಠದ ಪೀಠಾಚಾರ್ಯರ ಸಂಪತ್ತು ಮತ್ತು ಶಿಷ್ಯ–ಸಂಪತ್ತು ಎರಡೂ ಭವ್ಯವಾಗಿದ್ದವು. ಒಂದೆಡೆ ವ್ಯಾಸರಂಥ ಯೋಗಿ–ಮಹರ್ಷಿಗಳು ಇವರ ಶಿಷ್ಯತ್ವವನ್ನು ಸ್ವೀಕರಿಸಿದ್ದರೆ, ಇನ್ನೊಂದೆಡೆ ಮಾಂಧಾತ, ಉಷಾದೇವಿ–ಅನಿರುದ್ಧ ದಂಪತಿಗಳು, ಜನಮೇಜಯರಂಥ ಚಕ್ರವರ್ತಿ ಮಹಾರಾಜರು ತಮ್ಮೆಲ್ಲ ವೈಭವ–ಸಂಪತ್ತುಗಳನ್ನು ಸನ್ನಿಧಿಯವರ ಶ್ರೀಚರಣಕ್ಕೆ ಅರ್ಪಿಸಿ ಶ್ರೀಪೀಠದ ಆರ್ಥಿಕ–ಶಕ್ತಿಯನ್ನು ಗಗನಚುಂಬಿ ಯನ್ನಾಗಿಸಿದ್ದರು. ಶ್ರೀಪೀಠವು ವೈರಾಗ್ಯ ಪೀಠವಾಗಿದ್ದರೂ ಅದರ ಸಂಪತ್ತಿಗೆ ಯಾವ ಕೊರತೆಯೂ ಇರಲಿಲ್ಲ. ಕನಕ, ಕಾಮಿನಿ ಮತ್ತು ಕಾಂಚನ ಈ ಮೂರೂ 'ಬೇಡ' ಎನ್ನುವವರ ಬಳಿ ಬರುವುದೇ ಹೆಚ್ಚು. ರಾಜರ ಶ್ರೀಮಂತ– ರಾಜಬೊಕ್ಕಸ ಮತ್ತು ರಾಜಬಾಂಢಾರಗಳೇ ಶ್ರೀಪೀಠದ ಸೇವೆಗೆ ಕಂಕಣಬದ್ಧವಾಗಿ ನಿಂತುಕೊಂಡಿದ್ದವು.

**ಆದದ್ದೆಲ್ಲ ಒಳಿತೇ ಆಯಿತು.... :**

ಪರೀಕ್ಷಿತನ ಮಗ ಜನಮೇಜಯ ದೊರೆಯಿಂದ ಇಡೀ ಕೇದಾರಕ್ಷೇತ್ರವೇ ಶ್ರೀಪೀಠದ ಪೀಠಾಚಾರ್ಯರಿಗೆ ದಾನವಾಗಿ ಕೊಡಲ್ಪಟ್ಟಿತ್ತು. ತಾಮ್ರಶಾಸನವೊಂದು ಈ ದಾನವನ್ನು ಧ್ವನಿಸುತ್ತದೆ. ಕ್ರಿ. ಶ. ೧೮೫೪ರ ವರೆಗೆ ಸಮಸ್ತ ಕೇದಾರಕ್ಷೇತ್ರವೇ ಕೇದಾರ ಶ್ರೀಪೀಠದ ಪೀಠಾಚಾರ್ಯರ ವಶದಲ್ಲಿತ್ತು. ಆದರೆ ಈ ಮಧ್ಯ ಬ್ರಿಟಿಷರ ಮಧ್ಯಸ್ತಿಕೆ ಮತ್ತು ಮಧ್ಯಪ್ರವೇಶದಿಂದಾಗಿ ಕೇದಾರಕ್ಷೇತ್ರದ ಸರ್ವಸ್ವಾಮ್ಯಕ್ಕೆ ಕಡಿವಾಣ ಬಿತ್ತು. ೧೮೫೪ರ ನಂತರವೂ ಉತ್ತರ ಪ್ರದೇಶದ ಗಢವಾಲ ಜಿಲ್ಲೆಯ ೭೦, ಅಲ್ಮೋರಾ ಜಿಲ್ಲೆಯ ೪೩, ಟೆಹರಿ ಜಿಲ್ಲೆಯ ೨೭, ಡೆಹರಾಡೂನ ಜಿಲ್ಲೆಯ ೨ ಮತ್ತು ನೈನಿತಾಲ ಜಿಲ್ಲೆಯ ೧..... ಹೀಗೆ ಒಟ್ಟು ೧೪೩ ಗ್ರಾಮಗಳ ಸಂಪೂರ್ಣ ಆಯ–ಆದಾಯವು ಶ್ರೀಪೀಠಕ್ಕೆ ಸೇರುತ್ತಿತ್ತು. ಇದನ್ನು ಹೊರತು ಪಡಿಸಿ ಹಿಮಾಲಯ ಪ್ರಾಂತದಲ್ಲಿಯ ಅತ್ಯಂತ ಪ್ರಮುಖ ಕ್ಷೇತ್ರಗಳಾದ ಕಾಲೀಮಠ, ಉದಕಕುಂಡ, ಗೌರೀಕುಂಡ.... ಇತ್ಯಾದಿ ೨೨ ಕ್ಷೇತ್ರಗಳ ಸರ್ವಾಧಿಪತ್ಯವು ಶ್ರೀಪೀಠದ ವಶವರ್ತಿಯಾಗಿತ್ತು. ಭಾರತದ ಸ್ವಾತಂತ್ರ್ಯಾನಂತರ ೧೪೩ ಗ್ರಾಮಗಳ ಆಯ–ಆದಾಯವೆಲ್ಲ ಸರಕಾರದ ಅಧೀನವಾಗಿ ಕೇವಲ ಆ ಗ್ರಾಮಗಳಲ್ಲಿನ ಧಾರ್ಮಿಕ ಅಧಿಕಾರ ಮಾತ್ರ ಶ್ರೀಪೀಠಕ್ಕೆ ಉಳಿದುಕೊಂಡಿತು. ಹಿಮಾಲಯದ ೨೨ ಕ್ಷೇತ್ರಗಳಲ್ಲಿ ಕೇವಲ ಕೇದಾರನಾಥ, ಗುಪ್ತಕಾಶಿ, ಮಧ್ಯಮಹೇಶ್ವರ ಮತ್ತು ಓಖೀಮಠ ಈ ನಾಲ್ಕು ಕ್ಷೇತ್ರಗಳ ಒಡೆತನ ಮಾತ್ರ ಶ್ರೀಪೀಠಕ್ಕೆ ಉಳಿಯಿತು. ಮುಂದೆ ಶ್ರೀಪೀಠವು ಬಹುಮೊತ್ತದ ಸಾಲವನ್ನು ಭರಿಸಬೇಕಾದ ಪ್ರಸಂಗ ಬಂದಾಗ ಪೀಠಾಚಾರ್ಯರಿಗೆ ಅದು 'ನೀರಿಳಿಯದ ಗಂಟಲೊಳ್ ಕಡುಬಂ ತುರುಕಿದಂತಾಯ್ತು' ಎಂಬ ಪರಿಸ್ಥಿತಿಯನ್ನು ತಂದಾಗ ಸರಕಾರವೇ ಶ್ರೀಪೀಠದ ಉಸ್ತುವಾರಿಯನ್ನು ಮತ್ತು ಆಡಳಿತವನ್ನು ವಹಿಸಿಕೊಂಡಿತು. ೧೯೧೧ರ ಕುಮಾವು ಡಿವಿಜನ್ ಕಮಿಶನ್‌ರವರ ಆದೇಶದಂತೆ ಪೀಠಾಚಾರ್ಯರು ಶ್ರೀಪೀಠದ ಮೇಲಿನ ತಮ್ಮ ಬಹುಪಾಲು ಹಕ್ಕನ್ನು ಕಳೆದುಕೊಳ್ಳಬೇಕಾಯಿತು. ಸರಕಾರವೇ ಪೀಠಾಧಿಪತಿಗಳಿಗೆ ಪ್ರತಿ ತಿಂಗಳು ಗೌರವಧನ ಕೊಡತೊಡಗಿತು ಮತ್ತು ಶ್ರೀಪೀಠಾಚಾರ್ಯರ ಶಿಷ್ಯರ ಸಂಖ್ಯೆಯನ್ನು ನಿಗದಿಪಡಿಸಿತು. ಈ ಕುಮಾವು ಆದೇಶದಂತೆ ಪೀಠಾಚಾರ್ಯರು ತಮ್ಮ ಉತ್ತರಾಧಿಕಾರಿಗಳನ್ನು ನಿಯೋಜಿಸಿಕೊಳ್ಳುವಲ್ಲಿಯೂ ಕೆಲವು ನಿಯಮ–ನಿಬಂಧನೆಗಳಿಗೆ ಒಳಗಾಗಬೇಕಾಯಿತು.* ಸರಕಾರವು ಪೀಠಾಚಾರ್ಯರ ಅನಾವಶ್ಯಕ ಹೊಣೆಗಾರಿಕೆಯನ್ನು ಕಡಿಮೆಮಾಡಿತು. ಪೀಠಾಚಾರ್ಯರು ವ್ಯಾವಹಾರಿಕ ಜವಾಬ್ದಾರಿಯಿಂದ ಮುಕ್ತರಾಗುವಂತೆ ಮಾಡಿತು.. ಆದರೆ ಅದು ಪೀಠಾಚಾರ್ಯರ ಗೌರವ–ಘನತೆಗಳಿಗೆ ಯಾವುದೇ ವಿಧವಾದ ಚ್ಯುತಿ ತಂದಿಲ್ಲ. ಪೀಠಾಚಾರ್ಯರ ಯಾವ ಧಾರ್ಮಿಕ ಹಕ್ಕನ್ನೂ ಅದು ಕಿತ್ತುಕೊಂಡಿಲ್ಲ.

---

* ವಿವರಕ್ಕಾಗಿ ಲಿಂ. ಪಂ. ಕಾಶೀನಾಥ ಶಾಸ್ತ್ರಿಗಳು ಬರೆದ 'ಶ್ರೀ ಜಗದ್ಗುರು ಪಂಚಾಚಾರ್ಯರ ಪ್ರಾಚೀನತ್ವ' ಎಂಬ ಪುಸ್ತಕ ನೋಡಿ ಮತ್ತು ಪಂ. ಹರಿಕೃಷ್ಣ ರತೂಡಿಯವರು ಹಿಂದೀ ಭಾಷೆಯಲ್ಲಿ ಬರೆದ 'ಗಢವಾಲ ಕಾ ಇತಿಹಾಸ' ಪುಸ್ತಕ ನೋಡಿ.

ಸರಕಾರವು ಪೀಠಾಚಾರ್ಯರ ಪ್ರತಿಷ್ಠೆ–ಗೌರವಗಳಿಗೆಲ್ಲ ಮಾನ್ಯತೆ ನೀಡಿದೆ. ವೈರಾಗ್ಯ ಸಿಂಹಾಸನಾಧೀಶ್ವರರಿಗೆ ಈ ಆಯ–ವ್ಯಯಗಳ ಗೊಡವೆಯಾದರೂ ಏಕೆ ಬೇಕು? 'ಆದದ್ದೆಲ್ಲವೂ ಒಳಿತೇ ಆಯಿತು' ಎಂಬಂತೆ ಪೀಠಾಚಾರ್ಯರು ನಿಶ್ಚಿಂತರಾಗಿ ಜನತಾ–ಜನಾರ್ದನನ ಆಧ್ಯಾತ್ಮಿಕ–ಪ್ರಗತಿ ಮತ್ತು ಧಾರ್ಮಿಕ ಸೇವೆ–ಸಮ್ಮಾನಗಳಲ್ಲಿ ತೊಡಗಿಕೊಳ್ಳುವಂತಾಯಿತು.

## 'ರಾವಲ್'ಪದ ವಿಭೂಷಿತರಿಗೆ 'ತಿಲಕೋತ್ಸವ' :

ವೀರಶೈವರ ಪಂಚಪೀಠಾಧೀಶ್ವರರಲ್ಲಿ ಕೇದಾರ ಪೀಠಾಧೀಶ್ವರರು ಮಾತ್ರ ಈ ವಿಶೇಷ ಉಪಾಧಿಯನ್ನು ಹೊಂದಿರುತ್ತಾರೆ. 'ರಾವಲ್' ಎಂಬ ಉಪಾಧಿಯನ್ನು ಸರಕಾರವೇ ಪರಮಪೂಜ್ಯ ಪೀಠಾಚಾರ್ಯರಿಗೆ ಪ್ರದಾನ ಮಾಡಿ ಅಭಿವಂದಿಸುತ್ತದೆ. ಇದು ಭಾರತ ಮತ್ತು ಉತ್ತರ ಪ್ರದೇಶಗಳ ಉಭಯ ಸರಕಾರಗಳು ಶ್ರೀಪೀಠದ ಪೀಠಾಚಾರ್ಯರಿಗೆ ಕೊಡುವ ವಿಶೇಷ ಗೌರವಪೂರ್ಣ ಉಪಾಧಿ. ಈ ಕೇದಾರ ಪೀಠದ ಪೀಠಾಚಾರ್ಯರಿಗೆ ಮತ್ತು ಬದರೀ ಮಠಾಧಿಪತಿಗಳಿಗೆ ಮಾತ್ರ ಅಂದಿನ ಬ್ರಿಟಿಷ್ ಸರಕಾರ ಮಾನ್ಯಮಾಡಿದ ಈ 'ರಾವಲ್' ಪದವಿಯು ಕೊಡಲ್ಪಡುತ್ತದೆ. ಅದು ಅಂದಿನಿಂದ ಇಂದಿನವರೆಗೂ ಪರಂಪರಾಗತವಾಗಿ ನಡೆದುಕೊಂಡು ಬಂದಿದೆ.

ಉತ್ತರ ಪ್ರದೇಶದ ಟೆಹರಿ ಗಢವಾಲದ ಮಹಾರಾಜರು ವಿಧ್ಯುಕ್ತವಾಗಿ ಪೂಜೆ ಮಾಡಿ ಪರಮಪೂಜ್ಯರ ಪವಿತ್ರ ಫಾಲದ ಮೇಲೆ ತಿಲಕವನ್ನು ಇಡುವ ಮೂಲಕ ಅತ್ಯಂತ ವೈಭವದಿಂದ ಈ 'ತಿಲಕೋತ್ಸವ'ವನ್ನು ನಡೆಸಿಕೊಡುತ್ತಾರೆ. ಇದು ಟೆಹರಿ ಮಹಾರಾಜರಿಂದ ಪೀಠಾಚಾರ್ಯರಿಗೆ ಸಲ್ಲುವ ವಿಶೇಷ ಧಾರ್ಮಿಕ ಕಾರ್ಯಕ್ರಮವಾಗಿದೆ. 'ರಾವಲ್' ಪದವಿ–ಪ್ರದಾನ ಮತ್ತು 'ತಿಲಕೋತ್ಸವ' ಕಾರ್ಯಕ್ರಮಗಳು ಏಕಕಾಲದಲ್ಲಿ ನಡೆಯುತ್ತವೆ. ಕೇದಾರಪೀಠಕ್ಕೆ ಉತ್ತರಾಧಿಕಾರಿಗಳಾಗಿ ಬಂದವರಿಗೆ ಶ್ರೀಪೀಠದ ಅನನ್ಯ ಭಕ್ತರಾದ ಟೆಹರಿ ಗಢವಾಲದ ಮಹಾರಾಜರು ಮೊದಲು ತಿಲಕೋತ್ಸವವನ್ನು ಮಾಡಿ 'ರಾವಲ್' ಪದವಿಯನ್ನು ನೀಡುತ್ತಾರೆ. ನಂತರ ರಂಭಾಪುರಿ, ಕಾಶೀ, ಶ್ರೀಶೈಲ, ಉಜ್ಜಯಿನಿ ಪೀಠಾಧೀಶ್ವರರೆಲ್ಲ ಸೇರಿ ಇಲ್ಲವೆ ಯಾರಾದರೊಬ್ಬರು ರಾವಲ್‌ರಿಗೆ 'ಜಗದ್ಗುರುತ್ವ'ವನ್ನು ದಯಪಾಲಿಸುತ್ತಾರೆ. ಕೇದಾರ ಶ್ರೀಪೀಠದ ಪೀಠಾಚಾರ್ಯರು 'ವೈರಾಗ್ಯ ಸಿಂಹಾಸನಾಧೀಶ್ವರ'ರಾಗಿರುವ ಜೊತೆ ಜೊತೆಯಲ್ಲಿ ಕೇದಾರ ಸುಕ್ಷೇತ್ರದ 'ರಾವಲ್'ರೂ ಆಗಿರುತ್ತಾರೆ.

## ಶ್ರೀಪೀಠದ 'ಇತಿಹಾಸಶ್ರೀ' :

ಪಂಚಪೀಠಗಳಲ್ಲಿಯೇ ಅತಿ ಹೆಚ್ಚು ಪೀಠಾಚಾರ್ಯರನ್ನು ಕಂಡ ಗೌರವವು ಕೇದಾರ ಶ್ರೀಪೀಠಕ್ಕೆ ಸಂದಾಯವಾಗುತ್ತದೆ. ಇದುವರೆಗೆ ಶ್ರೀಪೀಠದ ಐತಿಹಾಸಿಕ

ದಾಖಲೆಗಳು ಗುರುತಿಸಿದ ಹಾಗೆ ೩೨೨ ಪೀಠಾಚಾರ್ಯರು ಶ್ರೀಪೀಠವನ್ನು ಅಲಂಕರಿಸಿದ್ದು ಈಗ ೩೨೩ನೆಯ ಪೀಠಾಚಾರ್ಯರು ಶ್ರೀಪೀಠದ ಮೇಲೆ ವಿರಾಜಮಾನರಾಗಿರುವರು. ಶ್ರೀಪೀಠದ ಪುಣ್ಯ ಹಾಗೂ ತಪಸ್ಸುಗಳನ್ನು ವರ್ಧಿಸಿದ ಜಗದ್ಗುರು ಶ್ರೀ ಭುಕುಂಡಲಿಂಗ ಶಿವಾಚಾರ್ಯರು ವೀರಭದ್ರನ ಅವತಾರವೆಂದೇ ಖ್ಯಾತರಾಗಿದ್ದಾರೆ. ಚೋಳ ದೇಶದ ವೀರಮಾಹೇಶ್ವರ ವಂಶದಲ್ಲಿ ಜನ್ಮವೆತ್ತಿದ ಇವರು ಸಕಲ ಶಾಸ್ತ್ರಪಾರಂಗತರು ಮತ್ತು ಪರವಾದಿ–ಭಯಂಕರರಾಗಿದ್ದರು. ಜಗದ್ಗುರು ಭುಕುಂಡಲಿಂಗ ಶಿವಾಚಾರ್ಯರದು ಶ್ರೀಪೀಠದ ಇತಿಹಾಸದಲ್ಲಿ ಬಹುದೊಡ್ಡ ಹೆಸರು. ಜಗದ್ಗುರು ಶ್ರೀ ಗಣೇಶಲಿಂಗ ಶಿವಾಚಾರ್ಯರು ಜಗದ್ಗುರು ಭುಕುಂಡಲಿಂಗ ಶಿವಾಚಾರ್ಯರ ಪರಮಪ್ರಿಯ ಶಿಷ್ಯರು ಹಾಗೂ ವಿದ್ಯಾ ಮತ್ತು ಯೋಗಸಿದ್ಧರು. ಇವರ ಕಾಲದಲ್ಲಿ ಶ್ರೀಪೀಠಕ್ಕೆ ಸಂಪತ್ತು ಮತ್ತು ವೈಭವ ಹತ್ತೂ ದಿಕ್ಕುಗಳಿಂದಲೂ ಹರಿದುಬರುತ್ತಲಿತ್ತು. ಇವರ ಕಾಲದಲ್ಲಿ ಕೇದಾರ ಕ್ಷೇತ್ರ ಮತ್ತು ಹಿಮಾಲಯದ ಬಹುಪಾಲು ಭಾಗವೆಲ್ಲ ಶ್ರೀಪೀಠದ ಪ್ರಭುತ್ವಕ್ಕೆ ಒಳಪಟ್ಟಿತ್ತು. ಇವರ ನಂತರ ಜ. ಶ್ರೀ ಸೋಮಲಿಂಗ, ಜ. ಶ್ರೀ ಗರ್ಗಲಿಂಗ, ಜ. ಶ್ರೀ ಭವ್ಯಲಿಂಗ, ಜ. ಶ್ರೀ ಜಗನ್ಮಂಗಲಲಿಂಗ, ಜ. ಶ್ರೀ ನಂದಿಲಿಂಗ, ಜ. ಶ್ರೀ ಕಲ್ಪಲಿಂಗ, ಜ. ಶ್ರೀ ಚೈತನ್ಯಲಿಂಗ ಶಿವಾಚಾರ್ಯರು ಇವರೇ ಮೊದಲಾದ ಮಹಾನ್ ತಪಸ್ವಿಗಳು, ಮಹಿಮಾಸಿದ್ಧರು ಮತ್ತು ಯೋಗಾಚಾರ್ಯರು ಶ್ರೀಪೀಠದ 'ಪ್ರಗತಿ ಪತಾಕೆ'ಯನ್ನು ಉತ್ತರೋತ್ತರವಾಗಿ ಪ್ರಕರ್ಷಿಸುತ್ತಲೇ ಬಂದಿದ್ದಾರೆ. ಶ್ರೀಪೀಠದ ೩೧೭ ಮತ್ತು ೩೧೮ ನೆಯ ಪೀಠಾಧಿಪತಿಗಳಾಗಿದ್ದ ಶ್ರೀ ಜ. ಕೇದಾರಲಿಂಗ ಹಾಗೂ ಶ್ರೀ ಜ. ಗಣೇಶಲಿಂಗ ಶಿವಾಚಾರ್ಯರ ಕಾಲದಲ್ಲಿ ಶ್ರೀಪೀಠದ ಆಯವು ಕಡಿಮೆಯಾಗಿ ವ್ಯಯವು ಅಧಿಕವಾಗತೊಡಗಿತು. ಆ ಸಮಯದಲ್ಲಿ ಸರಕಾರವು ಮಧ್ಯ ಪ್ರವೇಶಿಸಬೇಕಾಯಿತು. ೩೧೯ನೆಯ ಪೀಠಾಧ್ಯಕ್ಷರಾದ ಜ. ಶ್ರೀ ವಿಶ್ವಲಿಂಗ ಶಿವಾಚಾರ್ಯರು ಶ್ರೀಪೀಠದ ಆರ್ಥಿಕ–ಸ್ಥೈರ್ಯ ಮತ್ತು ವೀರಶೈವರ ಮನೋಧೈರ್ಯವನ್ನು ಹೆಚ್ಚಿಸುವುದಕ್ಕಾಗಿ ಕರ್ನಾಟಕ ಮಹಾರಾಷ್ಟ್ರಗಳ ತುಂಬೆಲ್ಲ ಧಾರ್ಮಿಕ–ಸಂಚಾರ ಕೈಕೊಂಡರು. ಇವರು ಡಿಶೆಂಬರ್ ೧೯೧೯ರಲ್ಲಿ ಬೀರೂರಿನಲ್ಲಿ ನಡೆದ ೯ನೆಯ ಅಖಿಲ ಭಾರತ ವೀರಶೈವ ಮಹಾಸಭೆಯಲ್ಲಿ 'ಅಹಂಭೂಮಿಕೆ'ಯನ್ನು ವಹಿಸಿದ್ದರು.

**ಹೊಸಬೆಳಕು :**

ಶ್ರೀಪೀಠದ ೩೨೦ನೆಯ ಪೀಠಾಧ್ಯಕ್ಷರಾಗಿದ್ದ ಶ್ರೀ ಜಗದ್ಗುರು ನೀಲಕಂಠ ಲಿಂಗ ಶಿವಾಚಾರ್ಯರು ಶ್ರೀಪೀಠದ ಇತಿಹಾಸದಲ್ಲಿಯೇ ಒಂದು ಹೊಸಬೆಳಕು. ಇವರು ಸಂಸ್ಕೃತ, ಹಿಂದೀ, ಮರಾಠಿ, ಕನ್ನಡ ಭಾಷೆಗಳಲ್ಲಿ ಪಾರಂಗತರಾಗಿದ್ದರಷ್ಟೇ ಅಲ್ಲ, ಆಯುರ್ವೇದ–ವಿದ್ಯಾವಿಶಾರದರೂ ಆಗಿದ್ದರು. ಇವರು ತಮ್ಮ ಸುದಕ್ಷ ಕರ್ತೃತ್ವ ಶಕ್ತಿಯಿಂದಾಗಿ ಶ್ರೀಪೀಠವನ್ನು 'ಋಣಮುಕ್ತ'ಗೊಳಿಸುವುದರ ಜೊತೆ ಜೊತೆಯಲ್ಲಿ

ಶ್ರೀಪೀಠದ ಆರ್ಥಿಕ–ಬಲವನ್ನು ಹೆಚ್ಚಿಸಿದರು. ಕರ್ನಾಟಕದ ಹೊಸಪೇಟೆ, ಬಳ್ಳಾರಿ ಇತ್ಯಾದಿ ಸ್ಥಳಗಳಲ್ಲಿ ಸಂಸ್ಕೃತ ಪಾಠಶಾಲೆಗಳನ್ನು ಸ್ಥಾಪಿಸಿದರು. ಪರಮ ಪೂಜ್ಯರು ಉತ್ತರ ಪ್ರದೇಶದ ಓಖೀಮಠ ಮತ್ತು ಗುಪ್ತಕಾಶಿಗಳ ಮಧ್ಯದಲ್ಲಿ 'ಉತ್ತರಾಖಂಡ ವಿದ್ಯಾಪೀಠ'ವೆಂಬ ಶಿಕ್ಷಣ–ಸಂಸ್ಥೆಯನ್ನು ಸ್ಥಾಪಿಸಿ ಪರ್ವತೀಯ ಕ್ಷೇತ್ರಗಳ ಮಕ್ಕಳನ್ನು ವಿದ್ಯಾವಂತರನ್ನಾಗಿಸಲು ಪ್ರಯತ್ನಿಸಿ ಪ್ರೋತ್ಸಾಹಿಸಿದರು. ಈ ವಿದ್ಯಾಪೀಠದಲ್ಲಿ ಸಂಸ್ಕೃತ, ಹಿಂದೀ ಭಾಷೆಗಳೊಂದಿಗೆ ಆಯುರ್ವೇದ ಮುಂತಾದ ವಿಷಯಗಳ ಅಧ್ಯಯನವನ್ನು ಮಾಡುವ ವ್ಯವಸ್ಥೆಯೂ ಇದೆ. ಈ ವಿದ್ಯಾಪೀಠವು ಈಗಾಗಲೇ ವಿಶ್ವವಿದ್ಯಾಲಯವಾಗುವ ಎಲ್ಲ ಲಕ್ಷಣಗಳನ್ನೂ ತೋರಿಸಿದ್ದು ಅದಕ್ಕಾಗಿ ಕೇದಾರ, ಬದರೀ, ಓಖೀಮಠ–ವಾಸಿಗಳು ಪ್ರಯತ್ನ ನಡೆಸಿದ್ದಾರೆ. ಈ ವಿದ್ಯಾಪೀಠದಲ್ಲಿ ಕೃತಜ್ಞತಾ ಭಾವದಿಂದ ಲಿಂ. ನೀಲಕಂಠಲಿಂಗ ಜಗದ್ಗುರುಗಳ ಅಮೃತಶಿಲಾ ವಿಗ್ರಹವನ್ನು ಸ್ಥಾಪಿಸಲಾಗಿದೆ. ಪರಮಪೂಜ್ಯ ಜಗದ್ಗುರುಗಳು ತಮ್ಮ ಬಹುಮುಖ ವ್ಯಕ್ತಿತ್ವವನ್ನು ಪೀಠದ ಹಾಗೂ ಪರ್ವತಪ್ರಾಂತದ ಜನಗಳ (ಪಹಾಡಿಗಳ) ಉದ್ಧಾರಕ್ಕಾಗಿ ಅಹರ್ನಿಶಿ ದುಡಿಸಿದರು. ಶ್ರೀಪೀಠದ ಇತಿಹಾಸದಲ್ಲಿ ಇವರ ಹೆಸರು ಯಾವತ್ತೂ ಅಜರಾಮರ.!!

## ಮತ್ತೊಮ್ಮೆ ಚೈತನ್ಯ–ಸ್ಪರ್ಶ :

ಶ್ರೀ ವಿಶ್ವನಾಥಲಿಂಗರು ಕೇದಾರಪೀಠದ ೩೨೧ನೆಯ ರಾವಲ್‌ರು. ಇವರು ನಿರಂತರವಾಗಿ ೨೧ ವರ್ಷಗಳ ಕಾಲ ಶ್ರೀಪೀಠದ ಸೇವೆಯನ್ನು ಮಾಡಿದರು. ಇವರಿಗೆ ಕಾರಣಾಂತರಗಳಿಂದ ಜಗದ್ಗುರು ಪಟ್ಟಾಭಿಷೇಕವಾಗಲಿಲ್ಲ. ಜ. ಶ್ರೀ ಶಾಂತಲಿಂಗ ಶಿವಾಚಾರ್ಯರು ಶ್ರೀಪೀಠದ ೩೨೨ನೆಯ ರಾವಲ್‌ರು ಮತ್ತು ಜಗದ್ಗುರುಗಳು. ಇವರ 'ಜಗದ್ಗುರು ಪಟ್ಟಾಭಿಷೇಕ'ವನ್ನು ಕಾಶೀ ಜಗದ್ಗುರು ಶ್ರೀ ವಿಶ್ವೇಶ್ವರ ಶಿವಾಚಾರ್ಯರು ಮತ್ತು ರಂಭಾಪುರೀ ಜಗದ್ಗುರು ಶ್ರೀ ಪ್ರಸನ್ನ ರೇಣುಕ ವೀರಗಂಗಾಧರ ಶಿವಾಚಾರ್ಯರು ನಡೆಯಿಸಿಕೊಟ್ಟರು. ಪರಮಪೂಜ್ಯ ಜ. ಶಾಂತಲಿಂಗ ಶಿವಾಚಾರ್ಯರು ೧೪ ವರ್ಷಗಳ ಕಾಲ ಶ್ರೀಪೀಠದ ಸೇವೆಯನ್ನು ಮಾಡಿದರು. ಜಗದ್ಗುರು ಶ್ರೀ ನೀಲಕಂಠಲಿಂಗ ಶಿವಾಚಾರ್ಯರ ನಂತರ ಸುಮಾರು ೨೦ ವರ್ಷಗಳವರೆಗೆ ಅನಾಯಕತ್ವದಲ್ಲಿ ಬಳಲುತ್ತಿದ್ದ ಶ್ರೀಪೀಠಕ್ಕೆ ಪುನಃ ನವ ಚೈತನ್ಯವನ್ನಿತ್ತ ಕೀರ್ತಿ ಇವರದು. ಶ್ರೀಪೀಠಕ್ಕೆ ಇವರು ಮತ್ತೆ ಮತ್ತೊಮ್ಮೆ ಮತ್ತೊಂದು ಸಶಕ್ತ ಭೂಮಿಕೆಯನ್ನು ಬರೆದು ಶ್ರೀಪೀಠವನ್ನು ಚೇತನಿಸಿದರು. ದಿನಾಂಕ : ೬–೨–೧೯೮೦ರಂದು ಪರಮಪೂಜ್ಯರು ಲಿಂಗೈಕ್ಯರಾದರು. ಪರಮಪೂಜ್ಯ ಜಗದ್ಗುರುಗಳು ತಮ್ಮ ಸಶಕ್ತ ಸಮರ್ಥ ಜೀವನದಿಂದ ಶ್ರೀಪೀಠದ ಘನತೆ–ಗೌರವಗಳನ್ನು ಬಹು ಎತ್ತರಕ್ಕೆ ಎತ್ತರಿಸಿದರು.

## ಹಂತ ಹಂತವಾಗಿ ಮೇಲೇರಿದ ಮಹಂತ ! ಃ

ಪರಮಪೂಜ್ಯ ಶ್ರೀ ೧೦೦೮ ಜಗದ್ಗುರು ಸಿದ್ಧೇಶ್ವರಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು ಶ್ರೀಮತ್ ಹಿಮವತ್ಕೇದಾರ ವೈರಾಗ್ಯ ಸಿಂಹಾಸನದ ೩೨೩ನೆಯ ಪೀಠಾಧ್ಯಕ್ಷರು. 'ರಾವಲ್' ಪದವಿಭೂಷಿತರಾದ ಪರಮಪೂಜ್ಯ ಜಗದ್ಗುರುಗಳು ವೈರಾಗ್ಯ ಸಿಂಹಾಸನವನ್ನು ಆರೋಹಣ ಮಾಡಿ ಈಗಾಗಲೇ ಎಂಟು ವರುಷಗಳು ಗತಿಸಿವೆ. ಒಂಬತ್ತನೆಯ ವರ್ಷದಲ್ಲಿ ಅವರೀಗ ಪದಾರ್ಪಣೆ ಮಾಡಿದ್ದಾರೆ.

ಕೇದಾರದ ವರ್ತಮಾನ ಪೀಠಾಧೀಶ್ವರರು ಅನುಭವದ ಒಂದು ತುಂಬು ಚೀಲ. ಜೀವನವೆಂಬ 'ಅನುಭವದ ಅಗ್ಗಿಷ್ಟಿಕೆ'ಯಲ್ಲಿ ಅವರು ತಮ್ಮ ಅಪ್ಪಟತನವನ್ನು ಸ್ಪಷ್ಟಪಡಿಸಿ ಪರಿಶುದ್ಧ ಚಿನ್ನವಾಗಿ ಹೊರಬಂದಿದ್ದಾರೆ. ಅವರ ಅನುಭವೀ ಜೀವನದ ಹಿಂದೆ ಸಾಧನೆಯ ಬಹುದೊಡ್ಡ ತಪಸ್ಸಿದೆ, ಪರಿಶ್ರಮದ ಉಸಿರಿದೆ, ಸದಿಚ್ಛೆ ಮತ್ತು ಸದಾಶಯಗಳ ಬೆಂಬಲವಿದೆ. ಪರಮಪೂಜ್ಯರು ಕಷ್ಟಸಹಿಷ್ಣುಗಳು. ಅವರು ಬಹಳಷ್ಟನ್ನು ಎದುರಿಸಿ ಎದುರಿಸಿ ಎತ್ತರಕ್ಕೆ ಏರಿದ್ದಾರೆ. ಪರಮಪೂಜ್ಯರು ಹಂತ ಹಂತವಾಗಿ ಮೇಲೇರಿ ಮಹಂತರಾಗಿ ನಿಂತಿದ್ದಾರೆ. ಪೂಜ್ಯರ ಜೀವನವು ಒಂದು 'ತೆರೆದಿಟ್ಟ ಪುಸ್ತಕ'ವಿದ್ದಂತಿದೆ. ಅದನ್ನು ಬೇಕಾದವರು ಓದಿ ಸ್ಫೂರ್ತಿ ಪಡೆಯಬಹುದು; ಪ್ರೇರಣೆಗೆ ಒಳಗಾಗಬಹುದು.

## ಶಿವದರ್ಶನ ಃ

ಪರಮಪೂಜ್ಯ ಜಗದ್ಗುರುಗಳದು ಆಕರ್ಷಕ ವ್ಯಕ್ತಿತ್ವ. ಆಕರ್ಷಣೆಗೆ ಒಳಗಾಗದವರನ್ನು ಕೂಡ ಆಕರ್ಷಣೆಗೆ ಒಳಗುಮಾಡುವ ಆಕರ್ಷಣೆ ಅವರಲ್ಲಿದೆ. ಅವರ ಮುಖದಲ್ಲಿ ಪ್ರಸನ್ನತೆ ಮತ್ತು ಪ್ರಶಾಂತತೆಗಳು ಮನೆಮಾಡಿವೆ. ತೃಪ್ತಿ ಅಲ್ಲಿ ಬೀಡುಬಿಟ್ಟಿದೆ, ಓಜ-ತೇಜಗಳು ನೆಲೆನಿಂತಿವೆ, ಸಂತೋಷ ಸಡಗರಿಸಿದೆ. ಜಟಾಧಾರಿಗಳಾದ ಅವರು ಭಸ್ಮಧ್ವಜರಾಗಿ ರುದ್ರಾಕ್ಷಿಮಾಲೆಗಳನ್ನು ಧರಿಸಿ ಯೋಗದಂಡವನ್ನು ಕೈಯಲ್ಲಿ ಹಿಡಿದುಕೊಂಡು ಹೊರಬಂದರೆ ಸಾಕ್ಷಾತ್ ಶಿವನನ್ನು ನೋಡಿದಂತಾಗುತ್ತದೆ. ಪರಮ ಪೂಜ್ಯರದು ಪುಣ್ಯಶರೀರ. ದೈವೀಕೃಪೆ ಮತ್ತು ಅದೃಷ್ಟಗಳು ಅವರನ್ನು ವಿಶೇಷವಾಗಿ ಅನುಗ್ರಹಿಸಿವೆ. ಪುಣ್ಯವೇ ಮೈತಳೆದು ಬಂದು ಅವರ ಬೆಂಗಾವಲಿಗೆ ನಿಂತುಕೊಂಡಂತಿದೆ. ಪರಮಪೂಜ್ಯರು ನಿತ್ಯವೂ ಮಾಡುವ ಜಪ-ತಪಗಳು ಅವರ ಪುಣ್ಯದ 'ಬಾಹುಬಲ'ವನ್ನು ದಿನೇ ದಿನೇ ಇನ್ನಷ್ಟು ಮತ್ತಷ್ಟು ಹೆಚ್ಚಿಸುತ್ತಲಿವೆ.

## ಜನ-ಜನಾಂಗದ ಪುಣ್ಯವರ್ಧನೆ ಃ

ಪರಮಪೂಜ್ಯ ಜಗದ್ಗುರುಗಳು ಯಾವಾಗಲೂ ಅಂತರ್ಮುಖಿಗಳಾಗಿದ್ದು ಜಪ-ತಪ-ಅನುಷ್ಠಾನ ಮತ್ತು ಯೋಗ-ಧ್ಯಾನ-ಸಾಧನಾದಿಗಳಲ್ಲಿ ತಮ್ಮನ್ನು ತಾವು

ತೊಡಗಿಸಿಕೊಂಡಿರುತ್ತಾರೆ. ಉತ್ಸವ, ಸಂಚಾರಗಳಲ್ಲಿಯೇ ಇರಲಿ; ಸಭೆ–ಸಮಾರಂಭಗಳಲ್ಲಿಯೇ ಇರಲಿ; ಏಕಾಂತದಲ್ಲಿರಲಿ ಅಥವಾ ಭಕ್ತರ ಜೊತೆ ಸಂಭಾಷಿಸುತ್ತಿರಲಿ, ಯಾವತ್ತೂ ಅವರು ರುದ್ರಾಕ್ಷಿಮಾಲೆಯನ್ನು ಎಳೆಯುತ್ತ ಜಪವನ್ನು ಮಾಡಿಕೊಂಡೇ ಇರುತ್ತಾರೆ. ಜಪ ಮಾಡುತ್ತ ರುದ್ರಾಕ್ಷಿಮಾಲೆಯನ್ನು ಅನವರತವೂ ಎಳೆದು ಹಾಕುತ್ತಿರುವ ಅವರನ್ನು ಕಂಡರೆ ಪರಮಪೂಜ್ಯರು ಅನುಕ್ಷಣವೂ ವೀರಶೈವರ ಮತ್ತು ಭಾರತೀಯ ಜನ–ಜನಾಂಗದ ಪುಣ್ಯವನ್ನು ಹೆಚ್ಚಿಸುತ್ತಲಿದ್ದಾರೆ ಎಂಬ ಭಾವ ಹೃದಯಾಂತರಾಳದಲ್ಲಿ ಆಕಾರ ತಳೆದು ನಿಲ್ಲುತ್ತದೆ.

## ಗತ ಬದುಕಿನ ವಿಹಂಗಮ–ನೋಟ :

ಕೇದಾರ ಶ್ರೀಪೀಠದ '**ಕೀರ್ತಿ ಮಕುಟ**'ದ ಕಾಂತಿಯನ್ನು ಹೆಚ್ಚಿಸಿದ ಪರಮಪೂಜ್ಯ ಜಗದ್ಗುರುಗಳವರ ಜೀವನವನ್ನು ಓದಿದಾಗ ನಿರಂತರವಾದ ಸಾಧನೆಗೆ ದೈವೀಬಲದ ಕೃಪೆ ದೊರೆತಾಗ ಅಂಥ ಜೀವನವೇ ಪರಮಪೂಜ್ಯವೆಂದೆನಿಸುತ್ತದೆ ಮತ್ತು ಪರಮ ಸಿದ್ಧಿಯನ್ನು ತನ್ನದನ್ನಾಗಿಸಿಕೊಳ್ಳುತ್ತದೆ ಎಂಬ ಸತ್ಯ ದೃಷ್ಟಿಗೋಚರವಾಗುತ್ತದೆ.

ಪರಮಪೂಜ್ಯ ಜಗದ್ಗುರುಗಳು ಕರ್ನಾಟಕ ರಾಜ್ಯದ ವಿಜಾಪುರ ಜಿಲ್ಲೆಯ ಬೀಳಗಿ ತಾಲ್ಲೂಕಿನ ಗುಳಬಾಳ ಗ್ರಾಮದಲ್ಲಿ ಕ್ರಿ. ಶ. ೧೯೫೦ ನೇ ಇಸ್ವಿಯಲ್ಲಿ ಜನಿಸಿದರು. ಅವರೇ ಹೇಳುವಂತೆ ಗುಳಬಾಳ ಅವರ ಜನ್ಮಸ್ಥಾನವೆಂದೆನಿಸಿದರೂ ಅವರು ಹುಟ್ಟಿದ್ದು ಮಹಾರಾಷ್ಟ್ರದ ಸೊಲ್ಲಾಪುರ ಜಿಲ್ಲೆಯ ಅಕ್ಕಲಕೋಟ ತಾಲ್ಲೂಕಿನ ಮೊರಬದಲ್ಲಿ. ಗುಳಬಾಳ ಗ್ರಾಮದ ಜಂಗಮ–ದಂಪತಿಗಳಾದ ವೇ. ಮೂ. ಶ್ರೀ ಬಸವಲಿಂಗಯ್ಯನವರು ಮತ್ತು ಸೌ. ಭಾಗೀರಥಿಬಾಯಿಯವರು ಪೂಜ್ಯರ ತಂದೆ ತಾಯಿಗಳು. ಬಾಲ್ಯದಲ್ಲಿಯೇ ಇವರು ತಂದೆ–ತಾಯಿಗಳನ್ನು ಕಳೆದುಕೊಂಡು ತಬ್ಬಲಿಯಾದರು. '**ಅನಾಥ ಬದುಕಿಗೆ ಆಕಾಶವೇ ಕಾವಲು**' ಎಂಬಂತೆ ಬಾಲ್ಯದಲ್ಲಿಯೇ ತಂದೆ–ತಾಯಿಗಳ ಪ್ರೀತಿ–ವಾತ್ಸಲ್ಯಗಳಿಂದ ವಂಚಿತರಾದ ಇವರನ್ನು ಇವರ ಪರಿವಾರದ ಜನ ಮತ್ತು ಗ್ರಾಮದ ಜನತೆ ಪಾಲಿಸುವ ಹೊಣೆ ಹೊತ್ತಿತು. ಇವರ ಬಾಲ್ಯದ ಹೆಸರು 'ಸಿದ್ಧರಾಮೇಶ್ವರ'. ಕೇದಾರ ಶಾಖಾಮಠದ ಹಿರೇಮಠ ಮನೆತನದಲ್ಲಿ ಜನಿಸಿದ ಇವರಿಗೆ ಬೂದಿಹಾಳದ ಫಕೀರ ಸ್ವಾಮಿಗಳು ಮಾಹೇಶ್ವರ ದೀಕ್ಷೆಯನ್ನಿತ್ತು ಆಶೀರ್ವದಿಸಿದರು.

## ಎತ್ತಿದವರ ಕೈಕೂಸು :

ಅಯ್ಯಾಚಾರವಾದ ಆ ಮೊದಲ ದಿನದಿಂದಲೇ ಪೂಜ್ಯರು ನಾಡಿಗೆ ತಮ್ಮ ನುಡಿ–ಸೇವೆಯ ಪ್ರಥಮ ಪುಷ್ಪವನ್ನು ಅರ್ಪಿಸಿದರು. ಅದು ಅಂದು ತರಳ ನೀಡಿದ ಪ್ರಥಮ ಪುಟ್ಟ ಪ್ರವಚನವಾಗಿತ್ತು! ತಂದೆ–ತಾಯಿಗಳಿಲ್ಲದ ಈ ತಬ್ಬಲಿ ಮಗುವಿಗೆ ಭಕ್ತರೇ ರಕ್ಷಣೆಯನ್ನಿತ್ತರು. ಮುದ್ದು ಮುಖದ ಈ ತೇಜಸ್ವೀ ಮಗುವನ್ನು ಮತ್ತು

ಅರಳು ಹುರಿದಂತೆ ಪಟಪಟನೆ ಮಾತನಾಡುವ ಈ ಪುಟ್ಟನನ್ನು ಕಂಡು ತಾಯಂದಿರಲ್ಲಿನ 'ತಾಯ್ತನ' ಎಚ್ಚತ್ತುಕೊಳ್ಳುತ್ತಿತ್ತು. ಅವರ ವಾತ್ಸಲ್ಯದ ಸೆರಗು ದೊಡ್ಡದಾಗುತ್ತಿತ್ತು. ಪುಟ್ಟ ಪೂಜ್ಯರು ಶ್ರೀಮಂತರಲ್ಲದಿದ್ದರೂ ಅವರಲ್ಲಿನ ಉದಾರ ಭಾವಕ್ಕೆ ಬಡತನವೇ ಇರಲಿಲ್ಲ. ಅವರು ತಾವು ತಿರುಗಿ ತಿರಿದು ತಂದರೂ ಮತ್ತೆ ಬೇರೆ ಬಡಮಕ್ಕಳನ್ನು ಕರೆದುಕೊಂಡು ಊಟ ಮಾಡುತ್ತಿದ್ದರು. **'ತಿರಿದುಕೊಂಡು ಬಂದು ಕರೆದುಕೊಂಡು ಊಟಮಾಡು'** ಎಂಬ ಈ ಸೂತ್ರವನ್ನು ಪೂಜ್ಯರು ತಮ್ಮ ಚಿಕ್ಕಂದಿನಲ್ಲಿಯೇ ಅಂಗವಿಸಿಕೊಂಡಿದ್ದರು.

## 'ವೈರಾಗ್ಯ ಪಾಠ'ದ ಅ,ಆ,ಇ,ಈ .......... :

ಪೂಜ್ಯರ ಪ್ರಾಥಮಿಕ ಅಧ್ಯಯನವು ಗುಳಬಾಳದಲ್ಲಿಯೇ ಪ್ರಾರಂಭವಾಯಿತು. ೧ರಿಂದ ೪ನೆಯ ತರಗತಿಯವರೆಗೆ ಅಲ್ಲಿಯೇ ಓದಿದ ಶ್ರೀಗಳನ್ನು ಯಾವುದೋ ಅದೃಶ್ಯ ಶಕ್ತಿ ಅವರ ಜನ್ಮಗ್ರಾಮವನ್ನು ಬಿಡಿಸಿ ಅವರನ್ನು ಬೇರೆ ಕಡೆಗೆ ಎಳೆಯತೊಡಗಿತು. ಆ ಶಕ್ತಿಯ ಕರೆಗೆ 'ಓ'ಗೊಟ್ಟ ಶ್ರೀಗಳು ಮನೆ, ಊರುಗಳನ್ನು ಬಿಟ್ಟು ಸೊಲ್ಲಾಪುರದ ಕಡೆಗೆ ತಮ್ಮ ಪಾದಯಾತ್ರೆಯನ್ನು ಬೆಳೆಸಿದರು. ಆ ವಯಸ್ಸೇನು? ಮಾತೇನು? ಸೊಲ್ಲಾಪುರದವರೆಗೆ ನಡೆದೇ ಬಂದರು. ಹಸಿವಾದೊಡೆ ಭಿಕ್ಷಾನ್ನ! ರಾತ್ರಿಯಾದೆಡೆ ನಿದ್ರೆ!! ಜನರಿಗೆ ನಾಲ್ಕು ಮುದ್ದು ಮುದ್ದು ನೀತಿ–ಮಾತುಗಳ ವಿತರಣ!!! ಸ್ನಾನ ಪೂಜೆಯ ನಂತರವೇ ಪ್ರಸಾದ. ಹೀಗೆ ಸಾಗಿತು ಅವರ ಪಾದಯಾತ್ರೆ. ಯಾವುದೋ ಒಂದು ಅವ್ಯಕ್ತ ದಿವ್ಯಶಕ್ತಿ ಅವರ ಕೈ ಹಿಡಿದು ನಡೆಸುತ್ತಿತ್ತು. ವೈರಾಗ್ಯ ಪೀಠಾಧೀಶ್ವರನಾಗಿ ಮುಂದೆ ಬೆಳಗುವ ಈ ಜಂಗಮ ಕುಡಿಗೆ ವೈರಾಗ್ಯವು ತನ್ನ ಪ್ರಾಥಮಿಕ ಪಾಠವಾದ ಅ,ಆ,ಇ,ಈ.......... ಗಳನ್ನು ಹೇಳಿಕೊಡುವಂತಿತ್ತು.

## ಕೇದಾರಕ್ಕೆ ಪ್ರಥಮ ಭೆಟ್ಟಿ :

ಏಕಾಂಗಿಯಾಗಿ ಬಂದ ತಬ್ಬಲಿ ಬಾಲಕನಿಗೆ ಸೊಲ್ಲಾಪುರದ ಹೊಟಗಿ ಬೃಹನ್ಮಠವು ಆಶ್ರಯ ನೀಡಿತು. ಶ್ರೀಗಳು ಅಲ್ಲಿದ್ದುಕೊಂಡು ವೈದಿಕ ವಿಧಿ–ವಿಧಾನಗಳನ್ನು ಕಲಿತುಕೊಂಡರು. ಸಂಸ್ಕೃತಕ್ಕೆ ತಮ್ಮನ್ನು ತಾವು ಪರಿಚಯಿಸಿಕೊಂಡರು. ಹೊಟಗಿ ಮಠದಲ್ಲಿದ್ದುಕೊಂಡಿರುವಾಗ ಶ್ರೀಗಳಿಗೆ ಕೇದಾರಕ್ಕೆ ಹೋಗಬೇಕೆಂಬ ಆಸೆಯಾಗತೊಡಗಿತು. ಆಸೆ ಒತ್ತಾಸೆಯಾಗಿ ಬೆಳೆಯತೊಡಗಿದಾಗ ಅದನ್ನು ನಿಯಂತ್ರಿಸುವುದು ಶ್ರೀಗಳಿಗೆ ಕಷ್ಟವಾಗತೊಡಗಿತು. ೧೯೬೨ರಲ್ಲಿ ಅವರು ಕೇದಾರದತ್ತ ಪ್ರಯಾಣ ಬೆಳೆಸಿದರು. ಕೇದಾರಕ್ಕೆ ಪೂಜ್ಯರು ಕೊಟ್ಟ ಪ್ರಥಮ ಭೆಟ್ಟಿಯು ಅವರ ಅನುಭವದ ಚೀಲವನ್ನು ಶ್ರೀಮಂತಿಸಿತು. ಕೇದಾರದವರೆಗೆ ಹೋಗುವುದೇ ಒಂದು ಸಾಹಸ. ಅನೇಕ ಅಡ್ಡಿ–ಆತಂಕ–ಅಪಾಯಗಳೊಂದಿಗೆ ಆಟವಾಡುತ್ತ ಕೇದಾರವನ್ನು ತಲುಪಿದ ಶ್ರೀಗಳು

ಅಲ್ಲಿನ ಹಿಮಪರ್ವತಗಳೊಂದಿಗೆ ಸಖ್ಯ ಬೆಳೆಸಿದರು. ಮೂರು ತಿಂಗಳವರೆಗೆ ಅಲ್ಲಿದ್ದು ಶ್ರೀಗಳು ಓಖೀಮಠದಲ್ಲಿನ ಓಂಕಾರೇಶ್ವರನ ಮತ್ತು ಗುಪ್ತಕಾಶಿಯಲ್ಲಿನ ವಿಶ್ವನಾಥನ ಪೂಜೆಯನ್ನು ನಿಷ್ಠೆಯಿಂದ ಮಾಡಿದರು. ಕೇದಾರದಲ್ಲಿ 'ರಾವಲ್' ಪದ ವಿಭೂಷಿತರಾಗಿದ್ದ ಶ್ರೀ ವಿಶ್ವನಾಥಲಿಂಗರ ಚೇಲಾ(ಶಿಷ್ಯ)ರಾಗಿ ಅವರ ಸೇವೆ ಮಾಡಿದರು. ಅವರಿಂದ ತಾಂತ್ರಿಕ ಯೋಗದಲ್ಲಿ ತರಬೇತಿ ಪಡೆದರು. ಈ ಮಧ್ಯ ೧೯೬೨ರಲ್ಲಿ ಮೊದಲ ಬಾರಿಗೆ ಲಿಂ. ಕಾಶೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳ ದರ್ಶನಾಶೀರ್ವಾದದ ಲಾಭ ಅವರದಾಯಿತು.

## ಅಧ್ಯಯನಕ್ಕಾಗಿ ಅತ್ತ ... ಇತ್ತ ..... :

ಕೇದಾರದ ಪ್ರಥಮ ಅನುಭವವನ್ನು ಪಡೆದು ೧೯೬೩ರ ಡಿಸೆಂಬರ್‌ನಲ್ಲಿ ಮತ್ತೆ ಸೊಲ್ಲಾಪುರಕ್ಕೆ ಮರಳಿ ಬಂದ ಶ್ರೀಗಳು ತಮ್ಮ ಸಂಸ್ಕೃತ ಓದನ್ನು ಮತ್ತೆ ಮುಂದು ವರಿಸಿದರು. ಸೊಲ್ಲಾಪುರದಿಂದ ನಾಂದೇಡಕ್ಕೆ ತೆರಳಿದ ಶ್ರೀಗಳು ಅಲ್ಲಿನ ಹೋಳಿ ಗಲ್ಲಿಯಲ್ಲಿರುವ ಸಂಸ್ಕೃತ ಪಾಠಶಾಲೆಯಲ್ಲಿ ಕೆಲಕಾಲ ಅಧ್ಯಯನ ಮಾಡಿದರು. ಶ್ರೀಯುತ ಹೂರಣೆಯವರು ಖರ್ಚು–ವೆಚ್ಚಗಳನ್ನು ಭರಿಸುವ ಹೊಣೆಹೊತ್ತಿದ್ದರು. ನಾಂದೇಡದಿಂದ ಶ್ರೀಗಳು ಬೆಂಗಳೂರಿಗೆ ದಯಮಾಡಿಸಿ ಅಲ್ಲಿನ ಮಹಂತರ ಮಠದಲ್ಲಿ ಆಶ್ರಯ ಪಡೆದು ಅಧ್ಯಯನ ಮಾಡತೊಡಗಿದರು. ಶ್ರೀಗಳು ಬೆಂಗಳೂರಿನ ಚಾಮರಾಜ ಸಂಸ್ಕೃತ ಮಹಾವಿದ್ಯಾಲಯದಿಂದ ಸಂಸ್ಕೃತ ಸಾಹಿತ್ಯ ಪರೀಕ್ಷೆಯನ್ನು ತೇರ್ಗಡೆ ಮಾಡಿದರು. ಎರಡ್ಮೂರು ವರ್ಷಗಳವರೆಗೆ ಅಲ್ಲಿದ್ದ ಶ್ರೀಗಳು ವೈದ್ಯಕೀಯ ಓದಿನತ್ತ ತಮ್ಮ ಗಮನ ಹರಿಸಿದರು. ಆ ದಿಶೆಯಲ್ಲಿ ಕೆಲ ವೈದ್ಯಕೀಯ ಪದವಿಗಳನ್ನು ಕೂಡ ಅವರು ತಮ್ಮವುಗಳನ್ನಾಗಿಸಿಕೊಂಡರು. ಆಯುರ್ವೇದ ವಿದ್ಯೆಯಲ್ಲೂ ಅವರು ಕೆಲಕಾಲ ಪರಿಶ್ರಮಿಸಿದರು.

## ಅಂಬೇಜೋಗಾಯಿ 'ಮಠಾಧೀಶ್ವರ' ಪದಕ್ಕೆ :

ಬೆಂಗಳೂರಿನಲ್ಲಿದ್ದು ಓದಿಕೊಂಡಿರುವಾಗಲೇ ಮಹಾರಾಷ್ಟ್ರದ ಮರಾಠಾ ವಾಡಾದಲ್ಲಿನ ಭೀಡ್ ಜಿಲ್ಲೆಯ ಅಂಬೇಜೋಗಾಯಿ ಮಠದ ಪಟ್ಟಾಧ್ಯಕ್ಷ ಪದಕ್ಕೆ ಶ್ರೀಗಳಿಗೆ ಕರೆಬಂತು. ಅಂಬೇಜೋಗಾಯಿ ಮಠ ಇತಿಹಾಸ–ಪ್ರಸಿದ್ಧ ಮಠ. ರಂಭಾಪುರೀ ಶಾಖೆಗೆ ಸೇರಿದ ಈ ಮಠಕ್ಕೆ ಪರಮಪೂಜ್ಯ ಹಿನ್ನೆಲೆ ಉಂಟು. ಕ್ರಿ ಶ. ೧೩೩೦ರಲ್ಲಿ ಈ ಶ್ರೀಮಠದ ಮಠಾಧ್ಯಕ್ಷರೊಬ್ಬರು 'ಜೀವಂತ–ಸಮಾಧಿ'ಯನ್ನು ತೆಗೆದುಕೊಂಡಿದ್ದರಿಂದ ಆ ಭಾಗದಲ್ಲೆಲ್ಲ ಇದೊಂದು 'ಜಾಗೃತ ಸ್ಥಳ'ವಾಗಿ ನಿಂತುಕೊಂಡಿದೆ. ಶ್ರೀಮದ್ರಂಭಾಪುರೀ ವೀರ ಸಿಂಹಾಸನಾಧೀಶ್ವರ ಪ್ರಸನ್ನ ರೇಣುಕ ವೀರ ಗಂಗಾಧರ ಶಿವಾಚಾರ್ಯ ಮಹಾಸ್ವಾಮಿಗಳವರು ತಮ್ಮ ದಿವ್ಯ ಸಾನ್ನಿಧ್ಯವನ್ನಿತ್ತು ಪಟ್ಟಾಭಿಷೇಕದ

ಕಾರ್ಯಕ್ರಮವನ್ನು ನೆರವೇರಿಸಿಕೊಟ್ಟರು. ಪಟ್ಟಾಭಿಷೇಕ ಸಮಾರಂಭಕ್ಕಾಗಿ ಆ ಕಾಲದಲ್ಲಿ ಸುಮಾರು ೭೦ ಸಹಸ್ರಕ್ಕೂ ಹೆಚ್ಚು ವಂತಿಗೆ ಸೇರಿತ್ತು. ಪಟ್ಟಾಭಿಷೇಕ ಕಾರ್ಯಕ್ರಮವನ್ನು ಆಗುಮಾಡಿ ಉಳಿದ ಹಣವನ್ನು ಪರಮಪೂಜ್ಯರು ಲೋಕಕಲ್ಯಾಣಕ್ಕಾಗಿ ವಿನಿಯೋಗಿಸಲು ಆಜ್ಞೆ ಮಾಡಿದರು.

## ವಿದ್ಯಾಧ್ಯಯನ :

ಅಂಬೇಜೋಗಾಯಿ ಮಠಾಧೀಶ್ವರರಾದ ನಂತರ ಪೂಜ್ಯರು ಮತ್ತಷ್ಟು ಓದಬೇಕೆಂಬ ಹದುಳ ಇಚ್ಛೆಯಿಂದ ಉನ್ನತ ವ್ಯಾಸಂಗಕ್ಕಾಗಿ ಕಾಶಿಗೆ ದಯಮಾಡಿಸಿದರು. ಕಾಶಿಯ ಜಂಗಮವಾಡಿ ಮಠದ ವಿಶ್ವಾರಾಧ್ಯ ಗುರುಕುಲದಲ್ಲಿ ಆಶ್ರಯಪಡೆದು ಅಧ್ಯಯನದಲ್ಲಿ ತೊಡಗಿಕೊಂಡರು. ಕಾಶಿಯ ಶ್ರೀ ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾಲಯದಲ್ಲಿ ಪ್ರವೇಶಪಡೆದು ಸಾಹಿತ್ಯದಲ್ಲಿ **'ಆಚಾರ್ಯ'** ಪದವಿಯನ್ನು ಪಡೆದುಕೊಂಡರು. ಈ ಅವಧಿಯಲ್ಲಿ ಪೂಜ್ಯರು ಒಳ್ಳೊಳ್ಳೆಯ ಹಿಂದೀ ಹಾಗೂ ಸಂಸ್ಕೃತ ಸಾಹಿತ್ಯದ ಮೇರುಕೃತಿಗಳನ್ನು ಓದಿ ತಮ್ಮ ಜ್ಞಾನಭಾಂಢಾರದ ವಿಸ್ತಾರವನ್ನು ವಿಸ್ತರಿಸಿಕೊಂಡರು. ಕನ್ನಡ, ಮರಾಠಿ ಮತ್ತು ಹಿಂದೀ ಭಾಷೆಗಳ ಮೇಲೆ ಪ್ರಭುತ್ವವನ್ನು ಗಳಿಸಿಕೊಂಡರು. ಈ ಮಧ್ಯ ಬಿಹಾರದಲ್ಲಿರುವ ನಾಲಂದಾಕ್ಕೆ ಹೋಗಿ ಅಲ್ಲಿನ ನಿಸರ್ಗ ಚಿಕಿತ್ಸಾಲಯದಲ್ಲಿದ್ದು ನಿಸರ್ಗ ಚಿಕಿತ್ಸಾ ತರಬೇತಿಯನ್ನು ಪಡೆದು ಬಂದರು. ಆಗಾಗ ಅಲ್ಲಲ್ಲಿ ನಡೆದ ಯೋಗ ಹಾಗೂ ಯೋಗ ಚಿಕಿತ್ಸಾ ಶಿಬಿರಗಳಲ್ಲಿ ಭಾಗವಹಿಸಿ ತಮ್ಮ ಯೌಗಿಕ ಜ್ಞಾನವನ್ನು ಹೆಚ್ಚಿಸಿಕೊಂಡರಲ್ಲದೆ ಯೋಗ ಚಿಕಿತ್ಸಾ ಕ್ರಮಗಳನ್ನು ಕಲಿತುಕೊಂಡರು. ಈ ವಿಧವಾಗಿ ಶ್ರೀಗಳು ಕಾಶೀವಾಸದಲ್ಲಿನ ತಮ್ಮ ಪ್ರತಿಯೊಂದು ಕ್ಷಣವನ್ನು ವಿದ್ಯಾರ್ಜನೆ ಮತ್ತು ಜ್ಞಾನಾರ್ಜನೆಗಾಗಿ ಉಪಯೋಗಿಸಿಕೊಂಡರು. ಪೂಜ್ಯರ ವಿದ್ಯಾಭ್ಯಾಸಕ್ಕಾಗಿ ಶ್ರೀಯುತ ಭೀಮಾಶಂಕ್ರೆಪ್ಪ ಮತ್ತು ಸಾಂಬಪ್ಪಾ ಗಿರವಲ್‌ಕರರವರು ಆರ್ಥಿಕ–ಸಹಾಯವನ್ನು ಒದಗಿಸಿದುದನ್ನು ಪೂಜ್ಯರು ಕೃತಜ್ಞತೆಯಿಂದ ನೆನೆದುಕೊಳ್ಳುತ್ತಾರೆ.

## 'ರಾವಲ್' ಪದವಿ ಮತ್ತು ತಿಲಕೋತ್ಸವ :

ಹಿಮವತ್ಕೇದಾರ ಪೀಠಾಧೀಶ್ವರರಾದ ಜಗದ್ಗುರು ಶ್ರೀ ಶಾಂತಲಿಂಗ ಶಿವಾಚಾರ್ಯರು ೧೯೮೦ರಲ್ಲಿ ಲಿಂಗೈಕ್ಯರಾದ ನಂತರ ಶ್ರೀಪೀಠವು ಅನಾಯಕತ್ವದಿಂದ ಬಳಲತೊಡಗಿತು. ಕಾಶೀ ಜಗದ್ಗುರು ಲಿಂ. ಶ್ರೀ ವಿಶ್ವೇಶ್ವರ ಶಿವಾಚಾರ್ಯರಿಗೆ ಆ ಕುರಿತು ಚಿಂತೆಯಾಯಿತು. ಯಾರೂ ಇಲ್ಲದ ಈ ಪೀಠದಲ್ಲಿ ಮತ್ತೆ ಸರಕಾರ ಮಧ್ಯ ಪ್ರವೇಶಿಸುವಂತಾಗಬಾರದು. ಈ ಹಿಂದೆ ಆ ವಿಧವಾದ ಕಹಿ ಅನುಭವವನ್ನು ಉಂಡ ಪೀಠವು ಚೇತರಿಸಿಕೊಳ್ಳುವುದೇ ಅಸಾಧ್ಯವಾಗಿಕೊಂಡಿರುವಾಗ ಅಂಥ ಪ್ರಸಂಗದ ಪುನರಾವರ್ತನೆಯಾಗದಂತೆ ಅವರು ಕಾಳಜಿ ವಹಿಸಿದರು. ವೀರಶೈವರ ನಿಯಂತ್ರಣ ಕಕ್ಷೆಯನ್ನು ಕೇದಾರಕ್ಷೇತ್ರವು

ತಪ್ಪುವಂತಾಗಬಾರದೆಂದು ಅವರು ಸರಕಾರದ ಜೊತೆ ಮಾತುಕತೆ ನಡೆಸಿದರು. ಅವರ ಪ್ರಯತ್ನ ಫಲಿಸಿತು. ಜಗದ್ಗುರುಗಳ ಸೂಚನೆಯಂತೆ ಅಂಬೇಜೋಗಾಯಿ ಮಠಾಧ್ಯಕ್ಷರಿಗೆ ರಾವಲ್ ಉಪಾಧಿಯನ್ನು ನೀಡಬೇಕೆಂದು ನಿರ್ಧರಿಸಲಾಯಿತು. ಆ ಪ್ರಕಾರ ಅಂಬೇಜೋಗಾಯಿ ಮಠಾಧ್ಯಕ್ಷರಿಗೆ ಉತ್ತರ ಪ್ರದೇಶದ ರಾಜ್ಯಪಾಲರು 'ರಾವಲ್' ಪದ ವಿಭೂಷಿತರಾಗಲು ಕೇಳಿಕೊಂಡರು. ೧೯೮೩ರಲ್ಲಿ ಪೂಜ್ಯರಿಗೆ ಟೆಹರಿ ಗಢವಾಲದ ಮಹಾರಾಜರಿಂದ 'ತಿಲಕೋತ್ಸವ' ನೆರವೇರುವ ಮೂಲಕ ಪೂಜ್ಯರನ್ನು 'ರಾಜಗುರು' ಗಳೆಂದು ಒಪ್ಪಿಕೊಂಡಂತಾಯಿತು ಮತ್ತು ಪೂಜ್ಯರಿಗೆ ರಾವಲ್ ಪದವಿಯನ್ನಿತ್ತು ಗೌರವಿಸಲಾಯಿತು.

## ವೈರಾಗ್ಯ ಸಿಂಹಾಸನಾರೋಹಣ :

ರಾವಲ್ ಪದ–ವಿಭೂಷಿತರಾದ ಪೂಜ್ಯ ಶ್ರೀ ಸಿದ್ಧೇಶ್ವರಲಿಂಗ ಶಿವಾಚಾರ್ಯರ 'ಜಗದ್ಗುರು ಪಟ್ಟಾಭಿಷೇಕ' ಕಾರ್ಯಕ್ರಮವನ್ನು ಆದಷ್ಟು ಬೇಗನೆ ಮಾಡಲು ಲಿಂ. ಕಾಶೀ ಜಗದ್ಗುರು ಶ್ರೀ ವಿಶ್ವೇಶ್ವರ ಶಿವಾಚಾರ್ಯರು ತಾವೇ ಮುಂಚೂಣಿಯಲ್ಲಿ ನಿಂತುಕೊಂಡು ಪಟ್ಟಾಭಿಷೇಕ ಕಾರ್ಯಕ್ರಮದ ಉಸ್ತುವಾರಿಯಲ್ಲಿ ತೊಡಗಿಕೊಂಡರು. ಈ ಸಂದರ್ಭದಲ್ಲಿ ಪರಮಪೂಜ್ಯ ಜಗದ್ಗುರುಗಳು ಸ್ವತಃ ತಮ್ಮ ವ್ಯಕ್ತಿತ್ವವನ್ನು ದುಡಿಸಿ ಸಾಕಷ್ಟು ವಂತಿಗೆ ಸೇರಿಸಿದರು. ಇದರಲ್ಲಿ ಹೂಲಿ ಸಾಂಬಯ್ಯನವರ ಶ್ರೀಮಠದ ಉಭಯ ಶ್ರೀಗಳವರು ಕೂಡ ಧಾರಾಳವಾಗಿ ತಮ್ಮ ಸಹಾಯ–ಸಹಕಾರಗಳನ್ನು ಸಲ್ಲಿಸಿದರು.

ಕಾಶೀ ಜಗದ್ಗುರು ಲಿಂ. ಶ್ರೀ ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳು ಮತ್ತು ಸದ್ಯದ ಶ್ರೀಶೈಲ ಜಗದ್ಗುರು ಶ್ರೀ ಉಮಾಪತಿ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳು ಸ್ವತಃ ಓಖೀಮಠ, ಕೇದಾರಗಳವರೆಗೆ ದಯಮಾಡಿಸಿ ತಮ್ಮ ದಿವ್ಯ ಸಾನ್ನಿಧ್ಯವನ್ನಿತ್ತು 'ಜಗದ್ಗುರು ಪಟ್ಟಾಭಿಷೇಕ ಸಮಾರಂಭ'ವನ್ನು ಅತ್ಯಂತ ಅದ್ದೂರಿಯಿಂದ ನೆರವೇರಿಸಿಕೊಟ್ಟರು. ಈ ಕಾರ್ಯಕ್ರಮಕ್ಕೆ ನಾಡಿನ ಮೂಲೆ ಮೂಲೆಗಳಿಂದ ಅನೇಕ ಶಿವಾಚಾರ್ಯರು, ತಪಸ್ವಿಗಳು ಮತ್ತು ಗಣ್ಯಮಾನ್ಯ ಭಕ್ತರು ಆಗಮಿಸಿ ಸಮಾರಂಭದ ವೈಭವವನ್ನು ಹೆಚ್ಚಿಸಿದರು. ಸೇರಿದ ಜನತೆಯು ಪೂಜ್ಯರನ್ನು ಶ್ರೀಮದ್ ಹಿಮವತ್ಕೇದಾರ ವೈರಾಗ್ಯ ಸಿಂಹಾಸನಾಧೀಶ್ವರ ರಾವಲ್ ಪದವಿಭೂಷಿತ ಪರಮಪೂಜ್ಯ ಶ್ರೀ ೧೦೦೮ ಜಗದ್ಗುರು ಸಿದ್ಧೇಶ್ವರಲಿಂಗ ಶಿವಾಚಾರ್ಯ ಮಹಾಸ್ವಾಮಿಗಳೆಂದು ಕರೆದು ಅವರಿಗೆ 'ಜೈ ಪರಾಕು' ಹೇಳಿ ಆನಂದಪಟ್ಟಿತು.

ಉತ್ತರ ಪ್ರದೇಶದ ಚಮೋಲಿ ಜಿಲ್ಲೆಯ ಓಖೀಮಠದಲ್ಲಿ ದಿ.: **೭–೬–೧೯೮೫ರ** ಶುಕ್ರವಾರದಂದು ನಡೆದ ಈ 'ಜಗದ್ಗುರು ಪಟ್ಟಾಭಿಷೇಕ ಕಾರ್ಯಕ್ರಮ'ದ ಪ್ರಾರಂಭದ ಹಂತದಿಂದ ಮೊದಲು ಮಾಡಿಕೊಂಡು ಕೊನೆಯ ಹಂತದವರೆಗೂ ಕಾಶೀ ಜಂಗಮವಾಡಿ

ಮಠದ ವಿಶ್ವಾರಾಧ್ಯ ಗುರುಕುಲದ ವಿದ್ಯಾರ್ಥಿಗಳು ಹಾಗೂ ಕಾಶೀ ವೀರಶೈವ ವಿದ್ವತ್ ಸಂಘದ ಸದಸ್ಯರು ಅಹಂಭೂಮಿಕೆಯನ್ನು ವಹಿಸಿ ಕಾರ್ಯ ಮಾಡಿದುದನ್ನು ಜ್ಞಾಪಿಸಿಕೊಳ್ಳದೆ ಇರಲಾಗದು.

## ಲೋಕಕಲ್ಯಾಣ–'ಕೈಂಕರ್ಯ' :

ಪರಮಪೂಜ್ಯರು ಪೀಠಾಧೀಶ್ವರರಾಗುತ್ತಲೇ ಅವ್ಯಾಹತವಾಗಿ ಸಮಾಜಕಲ್ಯಾಣ ಮತ್ತು ವಿಶ್ವಕಲ್ಯಾಣ ಕಾರ್ಯಗಳಲ್ಲಿ ತೊಡಗಿಕೊಂಡಿದ್ದಾರೆ. ಅವರಿಗೆ ವರುಷದ ತುಂಬೆಲ್ಲ ಉತ್ಸವ, ಧರ್ಮಜಾಗೃತಿ ಸಭೆ, ಧಾರ್ಮಿಕ ದೌರಾ, ಭಕ್ತರ ಮನೆಯ ಪೂಜಾ–ಪ್ರಸಾದ, ದೀಕ್ಷಾ, ಶಿಕ್ಷಾ, ಜ್ಞಾನ–ಬೋಧ ಕಾರ್ಯಕ್ರಮಗಳು, ಅನುಷ್ಠಾನ, ಆರಾಧನೆ... ಇತ್ಯಾದಿ ಸಮಾರಂಭಗಳು ಬಿಡುವಿಲ್ಲದ ಹಾಗೆ ತುಂಬಿಕೊಂಡಿರುತ್ತವೆ. ಈ ಮಧ್ಯ ಅನೇಕ ಶಾಖಾಮಠಗಳಿಗೆ ಭೆಟ್ಟಿ ಕೊಡಬೇಕು; ಅನೇಕ ಅನಾಯಕ ಮಠಗಳ ಉಸ್ತುವಾರಿಯನ್ನು ವಹಿಸಿಕೊಳ್ಳಬೇಕು. ಅನೇಕ ಮಠಗಳ ಅಧಿಕಾರಗಳು ಪೀಠಾಚಾರ್ಯರನ್ನೇ ಅರಸಿಕೊಂಡು ಬರುತ್ತವೆ. ಈ ದಿಶೆಯಲ್ಲಿ ೧೯೮೬ರಲ್ಲಿ ಮಹಾರಾಷ್ಟ್ರದ ಪರಭಣಿ ಜಿಲ್ಲೆಯ ಜಿಂತೂರು ಮಠದ ಆಡಳಿತವು ಪರಮಪೂಜ್ಯರ ಅಧಿಕಾರ–ಕಕ್ಷೆಯಲ್ಲಿ ಬಂದು ನಿಂತುಕೊಂಡಿದುದನ್ನು ಸ್ಮರಿಸಿಕೊಳ್ಳಬಹುದು.

## ವಿಧಾಯಕ ವ್ಯಕ್ತಿತ್ವ :

ಪರಮಪೂಜ್ಯರು ಈ ಮಧ್ಯ ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ ಕಾರ್ಯ–ಕ್ರಮಗಳಲ್ಲೂ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ. ಈ ಹಂತದಲ್ಲಿ ಅವರು ಮಾಡಿದ ಪ್ರಮುಖ ಕಾರ್ಯಗಳು –

೧) ಪರಮಪೂಜ್ಯರ ಆಶೀರ್ವಾದದಿಂದ ೧೯೭೧ರಲ್ಲಿ ಅಂಬೇಜೋಗಾಯಿಯಲ್ಲಿ ಕಲಾ ಹಾಗೂ ವಾಣಿಜ್ಯ ಮಹಾವಿದ್ಯಾಲಯವು ಪ್ರಾರಂಭಿಸಲ್ಪಟ್ಟಿತು.

೨) ೧೯೭೫ ರಲ್ಲಿ ಇದೇ ಗ್ರಾಮದಲ್ಲಿ ವಿದ್ಯಾರ್ಥಿ ವಸತಿ ಹಾಗೂ ಭೋಜನ ಗೃಹವು ಪ್ರಾರಂಭಗೊಂಡಿದೆ.

ಇದು ಅಲ್ಲದೆ, ಕರ್ನಾಟಕ, ಮಹಾರಾಷ್ಟ್ರ ಇತ್ಯಾದಿ ಪ್ರಾಂತಗಳಲ್ಲಿ ಅನೇಕ ಶಿಕ್ಷಣ–ಸಂಸ್ಥೆಗಳು, ಸಂಘ–ಸಂಸ್ಥೆಗಳು, ಸೇವಾ–ಸಂಸ್ಥೆಗಳು ತೆರೆದುಕೊಳ್ಳುವುದಕ್ಕೆ ಪರಮಪೂಜ್ಯರು ಸಣ್ಣ ಹಾಗೂ ದೊಡ್ಡ ಪ್ರಮಾಣದಲ್ಲಿ ಆರ್ಥಿಕ ಹಾಗೂ ನೈತಿಕ ಆಶೀರ್ವಾದವನ್ನು ಮಾಡಿ ಆ ಸಂಘ–ಸಂಸ್ಥೆಗಳ ಆತ್ಮಬಲವನ್ನು ಹೆಚ್ಚಿಸಿದ್ದಾರೆ. ಇವುಗಳನ್ನು ಹೊರತು ಪಡಿಸಿ ಪರಮಪೂಜ್ಯರು ಅನೇಕ ಬಡವಿದ್ಯಾರ್ಥಿಗಳಿಗೆ ಉದ್ಯೋಗಗಳನ್ನು ಕೊಡಿಸಿ ಅವರ ಜೀವನದ 'ಗ್ರಹಗತಿ'ಗಳು ಉಜ್ವಲಗೊಳ್ಳುವಂತೆ ಮಾಡಿ ಅವರ ಬದುಕಿಗೆ ಭದ್ರತೆಯ ಸ್ಪರ್ಶ ಮಾಡಿಸಿದ್ದಾರೆ.

## ಯೋಜನಾ–ನಕ್ಷೆ :

ಪರಮಪೂಜ್ಯ ಜಗದ್ಗುರುಗಳು ವೀರಶೈವ ಹಾಗೂ ನಾಡ–ಜನರ ಕಲ್ಯಾಣಕ್ಕಾಗಿ ಹತ್ತು ಹಲವು ಯೋಜನೆಗಳನ್ನು ಹಮ್ಮಿಕೊಂಡಿದ್ದು ಅವುಗಳಲ್ಲಿ ಕೆಲವು ಪ್ರಮುಖವಾದವುಗಳನ್ನು ಈ ಕೆಳಗೆ ಕೊಡಲಾಗಿದೆ–

೧) ಬಳ್ಳಾರಿ ಜಿಲ್ಲೆಯ ಸಿರಗುಪ್ಪ ತಾಲ್ಲೂಕಿನ ಅಗಸನೂರಿನಲ್ಲಿ ಈಗಾಗಲೇ ಮಠವೊಂದನ್ನು ಕಟ್ಟಿಸಿದ್ದು ಅದನ್ನು ಇನ್ನಷ್ಟು ಸುಸಜ್ಜಿತ ಹಾಗೂ ವ್ಯವಸ್ಥಿತಗೊಳಿಸಿ ಸನ್ನಿಧಿಯವರು ಆ ಭಾಗಕ್ಕೆ ದಯಮಾಡಿಸಿದಾಗ ಅಲ್ಲಿಯೇ ಇದ್ದು ಆ ಭಾಗದಲ್ಲಿ ಧರ್ಮಜಾಗೃತಿಯನ್ನುಂಟುಮಾಡುವುದು. ಅದನ್ನು ವೀರಶೈವರ ಹಾಗೂ ಪಂಚಾಚಾರ್ಯರ ಪವಿತ್ರ ಕಾರ್ಯಕ್ಷೇತ್ರವನ್ನಾಗಿಸುವುದು.

೨) ಕೇದಾರ ಕ್ಷೇತ್ರದಲ್ಲೊಂದು ಸ್ವತಂತ್ರ ಪಂಚಾಚಾರ್ಯ ಮಂದಿರ ಹಾಗೂ ಭವನ ನಿರ್ಮಾಣ ಮಾಡುವುದು. ಇದನ್ನು ಶ್ರೀ ಜಗದ್ಗುರು ಪಂಚಾಚಾರ್ಯ ಮಾನವ ಧರ್ಮ ಸಂಸ್ಥೆಯ ಸಹಾಯದಿಂದ ಮಾಡಬೇಕೆಂದು ತೀರ್ಮಾನಿಸಲಾಗಿದೆ.

೩) ಭಾರತದ ರಾಜಧಾನಿಯಾದ ದೆಹಲಿಯಲ್ಲಿ ಕೂಡ ಒಂದು ಪಂಚಾಚಾರ್ಯ ಭವನವನ್ನು ಸ್ಥಾಪಿಸುವ ವಿಚಾರ ಸನ್ನಿಧಿಯವರದಾಗಿದೆ. ಈ ದಿಶೆಯಲ್ಲಿ ಅವರು ಸರಕಾರದ ಪ್ರಮುಖ ವ್ಯಕ್ತಿಗಳೊಂದಿಗೆ ಯಶಸ್ವೀ ಮಾತುಕತೆಗಳನ್ನು ಆಡಿದ್ದಾರೆ.

೪) ಕರ್ನಾಟಕ ಪ್ರಾಂತದ ಬೀಳಗಿ ತಾಲ್ಲೂಕಿನಲ್ಲಿ ಒಂದು ಸಹಜ ಸುಂದರ ನೈಸರ್ಗಿಕ 'ಪಂಚಾಚಾರ್ಯಯೋಗ–ನಿಕೇತನ'ವನ್ನು ಕಟ್ಟುವುದು.

೫) ವಿಜಾಪುರ ಜಿಲ್ಲೆಯ ನಂದಿ ಫ್ಯಾಕ್ಟರಿ ಬಳಿ 'ಪಂಚಾಚಾರ್ಯ ನಗರ'ವೊಂದನ್ನು ನಿರ್ಮಾಣ ಮಾಡಿ ಅಲ್ಲಿ 'ವೈರಾಗ್ಯ ಮಂದಿರ'ವನ್ನು ಸ್ಥಾಪಿಸುವುದು. ಈಗಾಗಲೇ ಈ ದಿಶೆಯಲ್ಲಿ ಕೆಲ ಜಮೀನನ್ನು ಕೊಳ್ಳಲಾಗಿದೆ.

೬) ಬಳ್ಳಾರಿ ಜಿಲ್ಲೆಯ ಕೊಟ್ಟೂರು ಬಳಿ ಈಗಾಗಲೇ ಶ್ರೀಪೀಠದ ಸ್ಥಳವಿದ್ದು ಅಲ್ಲೊಂದು ಮಂದಿರ ಹಾಗೂ ಸೇವಾ–ಸಂಸ್ಥೆಯನ್ನು ಸ್ಥಾಪಿಸುವುದು.

೭) ಅಂಬೇಜೋಗಾಯಿಯಲ್ಲಿ ತಾಂತ್ರಿಕ–ತರಬೇತಿ–ವಿದ್ಯಾಲಯ ಮತ್ತು ಮಹಾವಿದ್ಯಾಲಯಗಳನ್ನು ಸ್ಥಾಪಿಸುವುದು....ಇತ್ಯಾದಿ.

## ವೀರ–ಕಂಪನ :

ಪರಮಪೂಜ್ಯ ಜಗದ್ಗುರುಗಳು ಕರ್ನಾಟಕ ಮತ್ತು ಮಹಾರಾಷ್ಟ್ರಗಳ ತುಂಬೆಲ್ಲ ಸಾಕಷ್ಟು ಸಂಚರಿಸಿ ಜನ–ಹಿತ ಕಾರ್ಯಗಳನ್ನು ಮಾಡಿದ್ದಾರೆ. ಸಂಸ್ಕೃತ ಮೊದಲಾದ ಚತುರ್ಭಾಷೆಗಳಲ್ಲಿ ಚೆನ್ನಾಗಿ 'ಗತಿ' ಇರುವ ಪೂಜ್ಯರು ಮರಾಠಿ, ಕನ್ನಡ ಮತ್ತು ಹಿಂದೀ ಭಾಷೆಗಳಲ್ಲಿ ಧಾರಾಕಾರವಾಗಿ ಮತ್ತು ಧಾರಾಳವಾಗಿ ಮಾತನಾಡಬಲ್ಲರು. ಹಾಸ್ಯ ರಸಭರಿತ ಅವರ ನೀತಿಪರ ಮತ್ತು ಬೋಧಪರ ಆಶೀರ್ವಚನಗಳು ಮತ್ತೆ ಮತ್ತೆ

ಮೆಲಕುಹಾಕುವಂತಿರುತ್ತವೆ. ಅವರು ತಮ್ಮ ಆಶೀರ್ವಚನದ ಪ್ರಾರಂಭದಲ್ಲಿ ತುಂಬು ಸಭೆಗಳಲ್ಲಿ ಮಾನವ–ಧರ್ಮದ ಉದ್ಘೋಷಣೆ ಹೇಳಿದರೆ ಸಭೆಯಲ್ಲಿ 'ವೀರ ಕಂಪನ' ಉಂಟಾಗುತ್ತದೆ. ಆ 'ನುಡಿ–ಜಾಗಟೆ' ಜನರನ್ನು ಜಾಗೃತರನ್ನಾಗಿಸುತ್ತದೆ. ಯೋಗಸಿದ್ಧರು, ನೀತಿನಿಷ್ಠರು ಮತ್ತು ಅನುಷ್ಠಾನಪ್ರಿಯರಾದ ಜಗದ್ಗುರುಗಳು ಕೇದಾರ ಶ್ರೀಪೀಠದ ಕೀರ್ತಿಯು ಮನೆ–ಮನೆಗಳನ್ನು ತುಂಬಿಕೊಳ್ಳುವಂತೆ ಮಾಡಿದ್ದಾರೆ. ಅವರ ಪರಮಪೂಜ್ಯ ವ್ಯಕ್ತಿತ್ವವು ವೀರಶೈವ ಧರ್ಮದ ಅಂತರಂಗವನ್ನು ಶ್ರೀಮಂತಿಸಿದೆ ಎಂದು ಹೇಳಿದರೆ ಇದೇನು ಅತಿಶಯೋಕ್ತಿಯ ಮಾತಲ್ಲವೆಂಬುದನ್ನು ಯಾರೂ 'ಅಲ್ಲ, ಇಲ್ಲ'ವೆನ್ನದೆಯೇ ಒಪ್ಪಿಕೊಳ್ಳಬೇಕಾಗುತ್ತದೆ.

|| ೬೦ ||

# ಶ್ರೀಮತ್ ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ ಪರಮಪೂಜ್ಯ ಶ್ರೀ ೧೦೦೮ ಜಗದ್ಗುರು ಉಮಾಪತಿ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳು

## ನಾವು ಬಂದೇsವ, ನಾವು ಬಂದೇವss...... :

"ನಾವು ಬಂದೇsವ, ನಾವು ಬಂದೇವss...... ಶ್ರೀಶೈಲ ನೋಡುದಕ್ಕ
ಸ್ವಾಮಿ ಸೇವಾ ಮಾಡಿ ಮತ್ತ ಹೋಗುದಕ್ಕ......"

**ಮತ್ತ ಹೋಗುದಕ್ಕ ಅಲ್ಲ, ಮುಕ್ತರಾಗುದಕ್ಕ**

ಎಂಬೀ 'ಗೀಗೀ' ಪದದ ಪಲ್ಲವಿ–ಚರಣಗಳು ಕಿವಿಗಳ ಮುಂದೆ ಪ್ರತ್ಯಕ್ಷವಾಗುತ್ತಲೇ ಮೈ–ಮನಗಳು ರೋಮಾಂಚನಕ್ಕೆ ಒಳಗಾಗುತ್ತವೆ, ಅಂತ:ಕರಣಗಳು ಅಂತರ್ಮುಖಿಯಾಗತೊಡಗುತ್ತವೆ, ಬುದ್ಧಿಯ ತರ್ಕ–ವಿತರ್ಕಗಳ ಗದ್ದಲವು ಶಾಂತವಾಗತೊಡಗುತ್ತದೆ, ಹೃದಯವು ಅರಳಿ ಹೂವಾಗಿ ನಿಂತುಕೊಳ್ಳುತ್ತದೆ, ದೇಹದ ಅಂತರಂಗ–ಬಹಿರಂಗಗಳ ತುಂಬೆಲ್ಲ ಯಾವುದೋ ಒಂದು ಅಲೌಕಿಕ ಅನುಭವವು ತುಂಬಿಕೊಳ್ಳ ತೊಡಗುತ್ತದೆ. ಹೌದು, ಶ್ರೀಶೈಲ ಕ್ಷೇತ್ರಾಧಿಪತಿಯಾದ ಶ್ರೀ ಮಲ್ಲಿಕಾರ್ಜುನ ಸ್ವಾಮಿಯ ಹಾಗೂ ಮಾತಾ ಭ್ರಮರಾಂಬೆಯ ದರ್ಶನವಾದರೆ ಸಾಕು, ನಾವು ಮುಕ್ತರಾದಂತೆಯೇ ಸರಿ. ಶ್ರೀಶೈಲ–ದರ್ಶನ ಮತ್ತು 'ಸ್ವಾಮಿಸೇವೆ' ನಮ್ಮನ್ನು ಅಶಾಂತ ಜೀವನದಿಂದ ಪ್ರಶಾಂತ ಅನುಭವದತ್ತ ಕೊಂಡೊಯ್ಯುತ್ತದೆ. ಶ್ರೀಶೈಲ ಸುಕ್ಷೇತ್ರದ ಮಹಿಮಾತಿಶಯವನ್ನು ಕೊಂಡಾಡುವಾಗ ಬುದ್ಧಿಯು ತನ್ನ ಗದ್ದಲ–ಗಲಾಟೆ–ಗಡಿಬಿಡಿಗಳಿಗೆಲ್ಲ ಇಲ್ಲಿ ಅವಕಾಶವಿಲ್ಲೆಂದು ತಿಳಿದು ಆ ಮಾತುಗಳ ಸತ್ಯಾಸತ್ಯತೆಯನ್ನು ಪರೀಕ್ಷಿಸುವ ಗೊಡವೆಗೆ ಹೋಗದೆ ತಕ್ಷಣವೇ ಅದಕ್ಕೆಲ್ಲ ಒಪ್ಪಿಕೊಂಡು ತನ್ನ ಸಮ್ಮತಿಯ 'ಹಸಿರು ನಿಶಾನೆ'ಯನ್ನು ತೋರಿಸುತ್ತದೆ.

## ಪುನರ್ಜನ್ಮದ ಮಾತೇ ಇಲ್ಲ :

**"ಶ್ರೀಶೈಲ ಶಿಖರಂ ದೃಷ್ಟ್ವಾ ಪುನರ್ಜನ್ಮ ನ ವಿದ್ಯತೇ"** ಶ್ರೀಶೈಲ ಶ್ರೀಶಿಖರದ ದರ್ಶನವಾದರೆ ಸಾಕು, ಪುನರ್ಜನ್ಮದ ಮಾತೇ ಇಲ್ಲ. ಜೀವನದಲ್ಲಿ ಒಮ್ಮೆಯಾದರೂ ಸರಿ, ಈ ಶ್ರೀಗಿರಿಯನ್ನು ನೋಡಿದ್ದಾದರೆ ಮತ್ತೆ ಮತ್ತೆ ಹುಟ್ಟುವ ಮತ್ತು ಮತ್ತೆ ಮತ್ತೆ ಸಾಯುವ ಈ ಜನ್ಮ–ಮರಣ ಚಕ್ರದಿಂದ ನಾವು ಶಾಶ್ವತವಾಗಿ ಬಿಡುಗಡೆಯನ್ನು

ಹೊಂದಿದಂತೆಯೇ. ಆ ನಂತರ ಈ ಹುಟ್ಟು–ಸಾವುಗಳೆಂಬ ಸಾಂಕ್ರಾಮಿಕ ರೋಗಗಳಿಗೆ ನಮ್ಮ ಬಳಿಗೆ ಬರಲು ಆಸ್ಪದವೇ ಇಲ್ಲ. ಜನನಿಯ ಜಠರದಲ್ಲಿ ಮತ್ತೆ ಮತ್ತೆ ಬಂದು ಮಲಗುವ ಕಷ್ಟದಿಂದ ನಾವು ಯಾವತ್ತೂ ಹೊರಗಾದಂತೆಯೇ ಸರಿ.

## ಶ್ರೀಶೈಲೇ ಮಲ್ಲಿಕಾರ್ಜುನಮ್....... :

'ಸೌರಾಷ್ಟ್ರೇ ಸೋಮನಾಥಂ ಚ ಶ್ರೀಶೈಲೇ ಮಲ್ಲಿಕಾರ್ಜುನಮ್' ಭಾರತದ ಒಳ–ಹೊರಗೆಲ್ಲ ವ್ಯಾಪಿಸಿಕೊಂಡಿರುವ ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಎರಡನೆಯದಾದ ಶ್ರೀ ಮಲ್ಲಿಕಾರ್ಜುನಲಿಂಗವು ಇರುವುದು ಶ್ರೀಶೈಲದಲ್ಲಿ. ವಿಶ್ವಸಂಚಾಲಕನಾದ ಸಾಕ್ಷಾತ್ ಶಿವಪರಮಾತ್ಮನೇ ಈ ಸುಕ್ಷೇತ್ರದಲ್ಲಿ ಮಲ್ಲಿಕಾರ್ಜುನ ಲಿಂಗವಾಗಿ ವಾಸಮಾಡಿಕೊಂಡಿದ್ದಾನೆ. ಕೈಲಾಸವನ್ನು ಬಿಟ್ಟು ಶಿವನೇ ಬಂದಾದ ಮೇಲೆ ಶಿವನ ಅರ್ಧಾಂಗಿಯಾದ ಪಾರ್ವತಿಗೇನು ಕೆಲಸ ಕೈಲಾಸದಲ್ಲಿ ? ಅಂತಲೇ ಅವಳೂ ಸಹ ತನ್ನ ಪತಿಯ ಜೊತೆ ವಾಸಮಾಡಿಕೊಂಡಿರುವುದಕ್ಕಾಗಿ ಮಾತಾ ಭ್ರಮರಾಂಬೆಯಾಗಿ ಶ್ರೀಶೈಲವನ್ನೇ ಸೇರಿಕೊಂಡಳು. ಜಗತ್ತಿನ ತಂದೆ–ತಾಯಿಗಳಾದ ಶಿವಪಾರ್ವತಿಯರೇ ಶ್ರೀಶೈಲವನ್ನು ತಮ್ಮ ಆವಾಸಸ್ಥಾನವನ್ನಾಗಿ ಮಾಡಿಕೊಂಡಾದ ಮೇಲೆ ಅವರ ಪ್ರಮಥಗಣಂಗಳಾದ ವೀರಭದ್ರ, ವಿನಾಯಕಾದಿಗಳೆಲ್ಲ ಶ್ರೀಶೈಲದಲ್ಲಿಯೇ ಬಂದು ವಾಸಮಾಡತೊಡಗಿದರು. ಸಾಕ್ಷಾತ್ ಕೈಲಾಸವೇ ಇಲ್ಲಿಗೆ ಬಂದಾದ ಮೇಲೆ ಶ್ರೀಶೈಲವೇ 'ಭೂಕೈಲಾಸ'ವಾಯಿತು. ಪಾರ್ವತಿ, ಪಾರ್ವತೀಪತಿ ಮತ್ತು ಪ್ರಮಥಗಣಂಗಳೆಲ್ಲ ಇಲ್ಲಿ ನೆಲೆನಿಂತಿದುದರಿಂದ ಇದೊಂದು 'ಸದಾ ಜಾಗೃತ ಸ್ಥಳ'ವಾಗಿ ನಿಂತುಕೊಂಡಿದೆ.

## ಸಾಮಾನ್ಯ ಶೈಲವಲ್ಲ ; ಇದು 'ಶ್ರೀ–ಶೈಲ !' :

ಶ್ರೀಶೈಲ ಹೆಸರೇ ಸೂಚಿಸುವಂತೆ ಇದು ಸಾಮಾನ್ಯ ಶೈಲವಲ್ಲ ಇದು ಶ್ರೀ–ಶೈಲ. 'ಶೈಲೇ ಶೈಲೇ ನ ಮಾಣಿಕ್ಯಂ, ಚಂದನಂ ನ ವನೇ ವನೇ' ಎಂಬ ಸುಭಾಷಿತದಂತೆ ಪ್ರತಿಯೊಂದು ಪರ್ವತದಲ್ಲೂ ಮಾಣಿಕ್ಯವಿರುವುದಿಲ್ಲ; ಪ್ರತಿವನದಲ್ಲೂ ಚಂದನ ವೃಕ್ಷಗಳಿರುವುದಿಲ್ಲ. ಆದರೆ ಯಾವ ಪರ್ವತದಲ್ಲಿ ಮಾಣಿಕ್ಯಗಳು ತುಂಬಿಕೊಂಡಿರುವವೋ ಅದು 'ಶ್ರೀಶೈಲ' ಅಥವಾ 'ಸಂಪದ್ಭರಿತ ಶೈಲ'ವೆಂದು ಕರೆಯಲ್ಪಡುತ್ತದೆ. ಇನ್ನು ಸಾಕ್ಷಾತ್ ಶ್ರೀ ಮಲ್ಲಿಕಾರ್ಜುನ ಸ್ವಾಮಿಯೇ ತನ್ನ ಶ್ರೀಮತಿಯೊಂದಿಗೆ ಇಲ್ಲಿ ವಾಸ ಮಾಡಿಕೊಂಡಿದ್ದಾನೆಂದ ಮೇಲೆ ಇದು 'ಶ್ರೀಶೈಲ'ವಲ್ಲದೆ ಮತ್ತೇನು ? ನಮ್ಮ ಶಿವ ತನ್ನ ಕುಟುಂಬ ಹಾಗೂ ಪ್ರಮಥ ಪರಿವಾರ ಸಮೇತನಾಗಿ ಇಲ್ಲಿ ವಾಸ್ತವ್ಯ ಮಾಡಿಕೊಂಡಿರುವುದರಿಂದ ಆತನಿಗೆ ಮತ್ತೆ ತನ್ನ ಕೈಲಾಸದತ್ತ ಯೋಚನೆಯಾಗಿ ಅತ್ತ ಹೋಗುವ ಪ್ರಶ್ನೆಯೇ ಇಲ್ಲ. ಇಲ್ಲಿ ಆತ ನಿಶ್ಚಿಂತನಾಗಿ, ನಿರಾಳನಾಗಿ, ಗಟ್ಟಿಯಾಗಿ ಇದ್ದುಕೊಂಡಿದ್ದಾನೆ.

## ಅಬ್ಬಾ, ಆ ಪರ್ವತಗಳು ! :

ಅಬ್ಬಾ, ಎಂಥ ಎತ್ತರವಾದ ಬೆಟ್ಟ–ಪರ್ವತಗಳು!! ಆ ಪರ್ವತಗಳ ಎತ್ತರವನ್ನು ನೋಡುತ್ತ ನಿಂತ ಮನುಷ್ಯನಿಗೆ ಈ ಪ್ರಕೃತಿಯ ಮುಂದೆ ತಾನೆಷ್ಟು ಕುಳ್ಳ, ಕುಬ್ಜ ಎಂಬ ಭಾವ ಬಾರದೇ ಇರುವುದಿಲ್ಲ. ಪರ್ವತಗಳ ಆ ವಿರಾಟ್ ಸ್ವರೂಪದ ದರ್ಶನವಾಗುತ್ತಲೇ ಮನುಷ್ಯ ಬಲಿಚಕ್ರವರ್ತಿಯ ಔದಾರ್ಯದ ಎದುರಿನಲ್ಲಿ ವಿಷ್ಣುಪರಮಾತ್ಮನೇ 'ವಾಮನ'ನಾದಂತೆ ವಾಮನನಾಗಿ ಬಿಡುತ್ತಾನೆ. 'ತಾನೇ ಶ್ರೇಷ್ಠ, ಸರ್ವಶ್ರೇಷ್ಠ' ಎಂದು ಗುಟುರುಹಾಕುತ್ತ ತಿರುಗುವ ಈತನ ಅಹಂಕಾರದ ಮೇಲೆ 'ಅಂಕುಶ–ಪ್ರಯೋಗ' ಮತ್ತು 'ಅಸ್ತ್ರ–ಪ್ರಯೋಗ'ವಾಗುತ್ತದೆ. ಆತನನ್ನು ಕೀಳರಿಮೆಯ ಪ್ರಜ್ಞೆ (Inferiority complex) ಕಾಡತೊಡಗುತ್ತದೆ. ಯಾರ ಮರ್ಜಿ–ಮುಲಾಜಿಗೆ ಒಳಗಾಗದೆ ತಾವೇ ತಾವಾಗಿ ಬೆಳೆದುನಿಂತ ಆ ಪರ್ವತ ಹಾಗೂ ಪರ್ವತ ಶ್ರೇಣಿಗಳನ್ನು ನೋಡಿದರೆ ಎದೆ ತುಂಬಿ ಬರುತ್ತದೆ. ಆಕಾಶದೆತ್ತರಕ್ಕೆ ಬೆಳೆದ ಆ ಪರ್ವತಗಳನ್ನು ನೋಡಿದರೆ ಅವು ಆಕಾಶದ ಬಳಿಹೋಗಿ ಆಕಾಶದ ಯೋಗ–ಕ್ಷೇಮವನ್ನು ವಿಚಾರಿಸಿಕೊಳ್ಳುತ್ತಿರುವಂತೆ ಕಾಣುತ್ತದೆ. ಗಗನಸಖರಾದ ಇಲ್ಲಿನ ಪರ್ವತಗಳು ಆಕಾಶದ ಜೊತೆ ಉಭಯ ಕುಶಲೋಪರಿಯಲ್ಲಿ ತೊಡಗಿಕೊಂಡಂತಿವೆ. ಎತ್ತ ತಿರುಗಿದರೂ ಕಣ್ಣು ಹಾಗೂ ಕಣ್ಣಾಲಿಗಳನ್ನು ತುಂಬಿಕೊಳ್ಳುವುದು ಪರ್ವತಗಳೇ. 'ವಿಶ್ವತೋ ಬಾಹು ವಿಶ್ವತೋ ಚಕ್ಷು' ಎಂಬ ಮಾತು ಸತ್ಯವೆಂದೆನಿಸತೊಡಗುತ್ತದೆ. ಆ ಪರ್ವತಗಳ ವಿರಾಟ್–ವೈಭವ ವನ್ನು ವರ್ಣಿಸಲು ಹೊರಟ 'ಶಬ್ದಶಕ್ತಿ'ಯು ಸೋಲೊಪ್ಪಿಕೊಂಡು 'ಅವರ್ಣನೀಯ' ಎಂದು ಹೇಳಿ ಶರಣಾಗತವಾಗಬೇಕು, ಅಷ್ಟೇ.

## ಪಾತಾಳಗಂಗೆ :

ಆಜಾನುಬಾಹು ಪರ್ವತಗಳ ಮಧ್ಯ ಮತ್ತು ಅವುಗಳ 'ಭದ್ರತಾ ರಕ್ಷೆ'ಯಲ್ಲಿ 'ಪಾತಾಳಗಂಗೆ' ಎಂಬ ಅಭಿದಾನವನ್ನು ಹೊಂದಿ ಪ್ರವಹಿಸುತ್ತಿದ್ದಾಳೆ ಕೃಷ್ಣಾ. ಈ ಪರ್ವತ ಪ್ರಾಂತದಲ್ಲಿ ವೇದವತಿ, ಘಟಪ್ರಭಾ, ಮಲಪ್ರಭಾ, ಭೀಮಾ, ತುಂಗಾ ಮತ್ತು ಭದ್ರಾನದಿಗಳಿಂದ ಕೂಡಿಕೊಂಡು ಕೃಷ್ಣಾನದಿಯು ಉತ್ತರವಾಹಿನಿಯಾಗಿ ಉತ್ತರಾಭಿ–ಮುಖವಾಗಿ ಹರಿಯುತ್ತಿದ್ದಾಳೆ. ಆ ಆಕಾಶದ ಅಡಿಯಲ್ಲಿ ಮತ್ತು ಬೆಟ್ಟ–ಪರ್ವತಗಳ ಶ್ರೀರಕ್ಷೆಯಲ್ಲಿ ಯಾವುದೇ ಅಪಾಯದ ಭಯವಿಲ್ಲದೆ ನಿಶ್ಚಿಂತಳಾಗಿ ಮತ್ತು ನಿರಭ್ರಳಾಗಿ ಹರಿಯುವ ಈ ನೀರೆ ಪಾತಾಳಗಂಗೆಯನ್ನು ನೋಡುವುದೇ ಕಣ್ಣಿಗೆ ಒಂದು ದೊಡ್ಡ ಹಬ್ಬ. ತಿಳಿತಿಳಿಯಾಗಿ ಹರಿವ ನದಿಯ ನೀರು ಪಾರದರ್ಶಕವಾಗಿದೆ. ಅದು ಇಡಿಯಾಗಿ ಬಿಡಿಯಾಗಿ ಹರಿದಾಗಲೂ ಸುಂದರವಾಗಿಯೇ ಕಾಣುತ್ತದೆ. ಪಾತಾಳಗಂಗೆಯಲ್ಲಿನ ನೀರು ಸ್ವಚ್ಛವಾಗಿದೆಯೇನೋ ಸರಿ, ಆದರೆ ಅದು ಸ್ವಚ್ಛಂದವಾಗಿ ಸ್ವೇಚ್ಛೆಯಂತೆ ಹರಿಯುವ ಹಾಗಿಲ್ಲ. ಏಕೆಂದರೆ ಬಲಿಷ್ಠವಾದ ಬೆಟ್ಟಗಳ ಬಿಗಿಯಾದ ಕಾವಲಿದೆ ಅದಕ್ಕೆ.

## ರಮ್ಯ–ರಮಣೀಯ ! :

ಮಾನವದಾಳಿಯ ಭಯವಿದ್ದಾಗ ಕಾಡು ಸ್ವಚ್ಛಂದವಾಗಿ ಬೆಳೆಯಲು ಅಂಜಿಕೊಳ್ಳುತ್ತದೆ, ಮೀನ–ಮೇಷ ಮಾಡುತ್ತದೆ. ಮಾನವದಾಳಿಯ ಭಯವೇ ಇಲ್ಲವೆಂದ ಮೇಲೆ ಅದು ತಾನೇ ತಾನಾಗಿ ತನಗೆ ತಿಳಿದಂತೆಲ್ಲ ಬೆಳೆದುನಿಂತುಕೊಳ್ಳುತ್ತದೆ. ಶ್ರೀಶೈಲ ಪರ್ವತಪ್ರಾಂತದಲ್ಲಿ ಕಾಡು ದಟ್ಟವಾಗಿ ಬೆಳೆದು ನಿಂತುಕೊಂಡಿದೆ. ಬಾನಿನೆತ್ತರಕ್ಕೆ ಬೆಳೆದ ಮರಗಳು, ವೇತ್ರ–ವೃಕ್ಷಗಳು, ಸೂರ್ಯರಶ್ಮಿಗಳನ್ನು ಭೂ–ಸ್ಪರ್ಶ ಮಾಡುವುದಕ್ಕೆ ಬಿಡುವುದೇ ಇಲ್ಲ. ತಮ್ಮ ಶಾಖೆ–ಪ್ರಶಾಖೆಗಳೆಂಬ ಕೈಗಳಿಂದ ಅವು ಸೂರ್ಯರಶ್ಮಿಯನ್ನು ತಡೆಯುತ್ತವೆ. ಈ ಕಾಡಿನಲ್ಲಿ ನಾಡ ಮೃಗಗಳ ಬೇಟೆಯ ಕಾಟವಿಲ್ಲದೆ ಕಾಡುಮೃಗಗಳು ನಿಶ್ಚಿಂತವಾಗಿವೆ. ಒಂದೆಡೆ ಕದಳೀವನವಾದರೆ, ಇನ್ನೊಂದೆಡೆ ವೇತ್ರವನ. ಒಂದೆಡೆ ಮಾಮರಗಳಾದರೆ, ಮತ್ತೊಂದೆಡೆ ಕಾಡುವೃಕ್ಷಗಳ ಚಾಮರ. ಇಲ್ಲಿನ ಎಲ್ಲವೂ ರಮ್ಯ ರಮಣೀಯ !! ಎತ್ತರವೂ ರಮಣೀಯವೇ, ಆಳವೂ ರಮಣೀಯವೇ !!! ಇಲ್ಲಿನ ಪ್ರಕೃತಿಯನ್ನು ನೋಡುತ್ತ ನಿಂತರೆ ಮನುಷ್ಯ ತನ್ನನ್ನೇ ತಾನು ಮರೆತುಬಿಡುತ್ತಾನೆ, ಮಂತ್ರಮುಗ್ಧನಾಗುತ್ತಾನೆ. ಪ್ರಕೃತಿಯ ಬಿಚ್ಚು ಮತ್ತು ಸ್ವಚ್ಛ ಮೈಯ ಸೌಂದರ್ಯವು ಮನುಷ್ಯನನ್ನು ಧ್ಯಾನಸ್ಥನನ್ನಾಗಿಸುತ್ತದೆ. ನಿಸರ್ಗ ಮಾತೆಯ ವೈವಿಧ್ಯಮಯ ಮತ್ತು ವಿಲಾಸಮಯ ಅಂಗ–ಭಂಗಿಗಳನ್ನು ನೋಡಬೇಕೆಂದರೆ ಶ್ರೀಶೈಲಕ್ಕೆ ಹೋಗಲೇಬೇಕು. ನಿಸರ್ಗದ ಮುಕ್ತ–ಸೌಂದರ್ಯವನ್ನು ಮುಕ್ತವಾಗಿ ಸವಿಯುವುದು ಇಲ್ಲಿ ಮಾತ್ರ ಸಾಧ್ಯ ಅಲ್ಲವೇ ?

## ನ ಭೂತೋ ನ ಭವಿಷ್ಯತಿ :

ಶ್ರೀಶೈಲವು ಸಿದ್ಧಕ್ಷೇತ್ರವೂ ಅಹುದು ಮತ್ತು ಪ್ರಸಿದ್ಧ ಕ್ಷೇತ್ರವೂ ಅಹುದು. ಭಾರತೀಯರ ಭಾವನಾ–ಪ್ರಪಂಚದಲ್ಲಿ ಬಹುದೊಡ್ಡ ಹೆಸರು ಮಾಡಿದ ಈ ಸುಕ್ಷೇತ್ರ ಭಾವುಕ ಜನಗಳನ್ನು ಲೋಹಚುಂಬಕದಂತೆ ತನ್ನತ್ತ ಆಕರ್ಷಿಸುತ್ತದೆ. ಸಾಕ್ಷಾತ್ ಶ್ರೀ ಮಲ್ಲಿಕಾರ್ಜುನಸ್ವಾಮಿಯೇ ವಾಸಮಾಡಿಕೊಂಡಿರುವುದರಿಂದ ಪುಣ್ಯಕ್ಷೇತ್ರವಾದ ಈ ಸ್ಥಳವು ಅಂತರ್ವಾಹಿನಿ ಮತ್ತು ಉತ್ತರವಾಹಿನಿಯಾಗಿ ಹರಿಯುವ ಪಾತಾಳಗಂಗೆಯಿಂದಾಗಿ ಪುಣ್ಯತೀರ್ಥವೂ ಆಗಿದೆ. ಶ್ರುತಿ, ಸ್ಮೃತಿ, ಪುರಾಣೇತಿಹಾಸ ಪ್ರಸಿದ್ಧವಾದ ಶ್ರೀಶೈಲ ಕ್ಷೇತ್ರವು, ಮಾತಾ ಭ್ರಮರಾಂಬೆಯು ನೆಲೆನಿಂತಿದುದರಿಂದ ಅಷ್ಟಾದಶ ಶಕ್ತಿಪೀಠಗಳಲ್ಲಿ ಒಂದಾಗಿದೆ. ಶಿವಶಕ್ತಿಯರ ಅನುಗ್ರಹಕ್ಕೆ ಪಾತ್ರರಾಗಬೇಕೆಂದರೆ ಶ್ರೀಶೈಲಕ್ಕೆ ಬರಬೇಕು. ಶ್ರೀಶೈಲವೆಲ್ಲ ಶಿವಶಕ್ತಿಮಯವಾಗಿದೆ. ಅಂತಲೇ ವ್ಯಾಸ ಮಹರ್ಷಿಯು ತನ್ನ 'ಸ್ಕಂದ ಪುರಾಣ'ದ ಶ್ರೀಶೈಲ ಖಂಡದಲ್ಲಿ **"ಶ್ರೀಶೈಲ ಸಮಂ ಕ್ಷೇತ್ರಂ ನ ಭೂತೋ ನ ಭವಿಷ್ಯತಿ"** –ಶ್ರೀಶೈಲಕ್ಕೆ ಸರಿಸಮಾನವಾದ ಕ್ಷೇತ್ರ ಈ ಹಿಂದೆ ಇರಲಿಲ್ಲ, ಇನ್ನು ಮುಂದೆ ಇರೋದಿಲ್ಲ" ಎಂದು ಘಂಟಾಘೋಷವಾಗಿ ಹೇಳಿದ್ದಾನೆ. ಇಲ್ಲಿ ಅಡಿ ಇಟ್ಟಲ್ಲೆಲ್ಲ

ತಪಸ್ವಿಗಳು ತಪಗೈದ ತಪೋತಾಣಗಳಿವೆ. ಅನುಭಾವಿಗಳು ಐಕ್ಯರಾದ ಐಕ್ಯಸ್ಥಲಗಳಿವೆ. ಯೋಗಿಗಳು ಯೋಗ ಸಾಧನೆ ಮಾಡಿದ ಯೋಗ–ವೇದಿಕೆಗಳಿವೆ. ಇಲ್ಲಿನ ಎಲ್ಲವೂ ಪವಿತ್ರ ಮತ್ತು ಪೂಜ್ಯ. ಇಲ್ಲಿಗೆ ಬಂದ ಮಾನವ ಮಹಾಮಾನವನಾಗುತ್ತಾನೆ. ಭವಿ ಮಹಾನುಭಾವಿಯಾಗಿ ನಿಂತುಕೊಳ್ಳುತ್ತಾನೆ.

**ಇತಿಹಾಸ :**

ಆದಿಕಾಲದಿಂದಲೂ ಈ ಸುಕ್ಷೇತ್ರವನ್ನು ನೋಡಲು ಅನೇಕ ಚಾರಿತ್ರಿಕ ಪುರುಷರು ಬಂದು ಹೋಗಿದ್ದಾರೆ. ಕೃತಯುಗದಲ್ಲಿ ಹಿರಣ್ಯಕಶ್ಯಪ, ತ್ರೇತಾಯುಗದಲ್ಲಿ ಶ್ರೀರಾಮಚಂದ್ರ, ದ್ವಾಪರಯುಗದಲ್ಲಿ ಪಂಚಪಾಂಡವರು ಈ ಕ್ಷೇತ್ರ–ದರ್ಶನ ಮಾಡಿದ್ದಾರೆ. ಅನೇಕ ಋಷಿ–ಮಹರ್ಷಿಗಳು, ಆಚಾರ್ಯ–ಪರಮಾಚಾರ್ಯರು ಇಲ್ಲಿ ನೆಲೆನಿಂತು ತಪಗೈದಿದ್ದಾರೆ. ಅಕ್ಕ ಅಲ್ಲಮರಂಥ ಅನುಭಾವಿಗಳು ಈ ಕ್ಷೇತ್ರದಲ್ಲಿ ಆನಂದದಿಂದ ವಿಹರಿಸಿ ಐಕ್ಯರಾಗಿದ್ದಾರೆ. ಚೋಳ, ಕದಂಬ, ಪಲ್ಲವ, ಚಾಲುಕ್ಯ, ಕಾಕತೀಯ ಇತ್ಯಾದಿ ರಾಜಮನೆತನಗಳು ಈ ಕ್ಷೇತ್ರಯಾತ್ರೆ ಮಾಡಿ ಧನ್ಯರಾಗಿದ್ದಾರೆ. ಈಗಲೂ ಸಹ ದಿನನಿತ್ಯವೂ ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಯಾತ್ರಾರ್ಥಿಗಳು ತಂಡೋಪತಂಡವಾಗಿ ಬಂದು ಸ್ವಾಮಿಯ ಮತ್ತು ಭ್ರಮರಾಂಬೆಯ ದರ್ಶನ ಪಡೆಯುತ್ತಾರೆ. ಶಿವರಾತ್ರಿ ಮತ್ತು ಯುಗಾದಿಯ ಪರ್ವದಿನಗಳಲ್ಲಂತೂ ಲಕ್ಷ ಲಕ್ಷ ಜನ ಯಾತ್ರಿಕರು ಈ ಕ್ಷೇತ್ರವನ್ನು ಸಂದರ್ಶಿಸುತ್ತಾರೆ. ನಿತ್ಯವೂ ಇಲ್ಲಿ ಭಕ್ತರ ಭಕ್ತಿಯ ಜಾತ್ರೆ ನಡೆದುಕೊಂಡಿರುತ್ತದೆ. **'ಮಹಾಂತ ಮಲ್ಲಯ್ಯ ಉಘೇ ಉಘೇ....'** ಎಂದು ಹೃದಯ ತುಂಬಿ ಕೂಗುತ್ತ ನಡೆಯುವ ಭಕ್ತರ ಆ ಭಕ್ತಿ–ವೈಭವವನ್ನು ನೋಡಲು ಕೂಡ ಪುಣ್ಯ ಬೇಕು. ಶ್ರೀಶೈಲವನ್ನು ನೋಡಿಯಾದ ಮೇಲೆ ಕೈವಲ್ಯೋಪನಿಷತ್ತಿನಲ್ಲಿ ಹೇಳಲಾದ **"ಶ್ರೀಶೈಲ ದರ್ಶನಾತ್ ಮುಕ್ತಿ:"** ಎಂಬ ಮಾತು ಅಕ್ಷರಶ: ಸತ್ಯವೆಂದೆನಿಸದೆ ಇರಲಾರದು.

**ಒಂದೆಡೆ ...... ಇನ್ನೊಂದೆಡೆ ...... :**

ಒಂದೆಡೆ ಶ್ರೀಗಿರಿವಾಸ ಶ್ರೀ ಮಲ್ಲಿಕಾರ್ಜುನಸ್ವಾಮಿ, ಇನ್ನೊಂದೆಡೆ ನಿಸರ್ಗದ ವೈಭವೋಲ್ಲಾಸ ; ಒಂದೆಡೆ ಭ್ರಮರಾಂಬೆ, ಮತ್ತೊಂದೆಡೆ ಪಾತಾಳಗಂಗೆ ! ಒಂದೆಡೆ ಭಕ್ತಿಜಾತ್ರೆ, ಇನ್ನೊಂದೆಡೆ ಯಾತ್ರಾರ್ಥಿಗಳ ಕ್ಷೇತ್ರಯಾತ್ರೆ ! ಒಂದೆಡೆ 'ಉಘೇ ಉಘೇ' ಎಂಬ ಭಕ್ತರ ಧ್ವನಿ, ಮತ್ತೊಂದೆಡೆ ಆ ಧ್ವನಿಯ ಮರುಪ್ರಸಾರ ಮಾಡುವ ಪರ್ವತ–ಕಂದರಗಳ ಪ್ರತಿಧ್ವನಿ ! ಇಡೀ ವಾತಾವರಣವೇ ಚೈತನ್ಯಮಯ ! ಶ್ರೀಶೈಲದಲ್ಲಿ ಚೈತನ್ಯವೇ ಮನೆಮಾಡಿ ನಿಂತುಕೊಂಡಿದೆ. ಕಣ್ಣೆತ್ತಿ ಎತ್ತ ನೋಡಿದಡತ್ತಲೆಲ್ಲ ದಿವ್ಯ ದರ್ಶನ ! ದೇವ ದರ್ಶನ !! ವಿರಾಟ್ ದರ್ಶನ !!!

## ಶ್ರೀಮದ್ ಗಿರಿರಾಜ ಸೂರ್ಯಪೀಠ :

ಪ್ರಕೃತಿ ಹಾಗೂ ಪರ್ವತಗಳ ವೈಭವೋಲ್ಲಾಸಗಳ ಮಹಾಮನೆಯಂತಿರುವ ಶ್ರೀಶೈಲದಲ್ಲಿ ಉದಯವಾಯಿತು ನಮ್ಮ ಚೆನ್ನ ಚೆಲುವ ವೀರಶೈವ ಶ್ರೀಮದ್ಗಿರಿರಾಜ ಮಹಾಪೀಠ. ಆದಿಜಗದ್ಗುರು ಪಂಡಿತಾರಾಧ್ಯರು ಕಾಡನ್ನೇ ತಮ್ಮ ಕಾರ್ಯಕ್ಷೇತ್ರ ವನ್ನಾಗಿಸಿಕೊಂಡರು. ಪ್ರಕೃತಿಯ ಮಡಿಲಲ್ಲೊಂದು ಸೂರ್ಯನಂದದಿ ಬೆಳಗುವ ಸೂರ್ಯ ಸಿಂಹಾಸನ !! ಮಾನವ ಧರ್ಮವನ್ನೇ ಉಸಿರಾಗಿಸಿಕೊಂಡ, ವಿಶ್ವಶಾಂತಿಯನ್ನೇ ತಮ್ಮ ಜೀವನದ ಗುರಿಯಾಗಿಸಿಕೊಂಡ ಮಹಂತರ, ಮಹಾಚಾರ್ಯರ ಸೂರ್ಯ–ಪೀಠ ! ಪರ್ವತ ಪ್ರಾಂತದಲ್ಲಿರುವ ಶ್ರೀ ಪರ್ವತ ಪೀಠ !! ಶ್ರೀಶೈಲ 'ಸೂರ್ಯ'ಪೀಠವು ಅಂಧಕಾಸುರನ ಅಟ್ಟಹಾಸಕ್ಕೆ ಕೊನೆಹೇಳಿತು. ತಮಸ್ಸು ಕಾಲಿಗೆ ಬುದ್ಧಿ ಹೇಳಿ ಫರಾರಿಯಾಗುವ ಹಾಗೆ ಮಾಡಿತು. ಸೂರ್ಯಪೀಠವು ಅಮಾವಾಸ್ಯೆಯನ್ನು ಪೂರ್ಣಿಮೆಯನ್ನಾಗಿಸಿತು. ಕತ್ತಲೆಯು 'ಕಿಮಕ್' ಅನ್ನದ ಹಾಗೆ ಅದರ ಕುಮ್ಮಕ್ಕನ್ನಡಗಿಸಿತು. ಈ ಶ್ರೀಪೀಠವು ಜನಗಳಲ್ಲಿ ತುಂಬಿಕೊಂಡಿರುವ ಅಜ್ಞಾನಾಂಧಕಾರವನ್ನು ಹೊಡೆದು ಹಾಕಿ ಅಲ್ಲಿ ಸುಜ್ಞಾನವೆಂಬ ಜ್ಞಾನಬೆಳಗನ್ನು ತುಂಬಿ ಬೆಳಗಿಸಿರುವುದರಿಂದಲೇ ಇದಕ್ಕೆ 'ಸೂರ್ಯಪೀಠ' ಮತ್ತು 'ಸೂರ್ಯ ಸಿಂಹಾಸನ'ವೆಂಬ ಅನ್ವರ್ಥಕನಾಮ ಬಂದಿದೆ. ಸೂರ್ಯನುದಯವಾಗುತ್ತಲೇ ಕತ್ತಲೆಯು ಲೋಕದಿಂದ ಕಾಲ್ದೆಗೆಯುತ್ತದೆ. ಅದಕ್ಕೆ ಹೇಳುವುದೇ ಬೇಡ. ಅಂತೆಯೇ ಸದ್ಧರ್ಮದ ಬೆಳಕನ್ನು ಬೀರುವ ಈ ಸೂರ್ಯಪೀಠದ ಹೆಸರು ಕೇಳಿದೊಡನೆ ಅಧರ್ಮ, ಅಜ್ಞಾನ, ಅವಿವೇಕಗಳಿಗೆಲ್ಲ ಹೇಳಹೆಸರಿಲ್ಲದಂತೆ ಓಡಿಹೋಗುವುದೊಂದೇ ಕೆಲಸ. ಸೂರ್ಯ ಸಿಂಹಾಸನದ ಗರಿಮೆ–ಗಟ್ಟಿಗತನಗಳ ಎದುರಿನಲ್ಲಿ ಎಂಥ ಘಟಾನುಘಟಿಗಳು ಮತ್ತು ಅತಿರಥ–ಮಹಾರಥರು ಕೂಡ ವಿನಮ್ರರಾಗಿ ನಿಂತುಕೊಳ್ಳುತ್ತಾರೆ. ಸೂರ್ಯಪೀಠದ ಪೂಜ್ಯತೆಯ ಪ್ರಭಾವಕ್ಕೆ ಒಳಗಾದ ದುರಹಂಕಾರಿಗಳ ದುರಹಂಕಾರವು ಅಸುನೀಗುತ್ತದೆ ಮತ್ತು ಅಸ್ತಮಿಸುತ್ತದೆ. ಧರ್ಮನಿಷ್ಠರಲ್ಲಿ ಪುನಃ ಪ್ರಾಣವು ಪ್ರತಿಷ್ಠಿತವಾಗುತ್ತದೆ.

## ಅರಿವಿನ ಶುದ್ಧ ಬೆಳಗು :

ಪರಶಿವನ ಪರಮಾದೇಶವನ್ನು ಪಡೆದು ಶಿವನ ತತ್ಪುರುಷ ಮುಖದಿಂದ ಸಂಜನಿಸಿದ ಆದಿಜಗದ್ಗುರು ಪಂಡಿತಾರಾಧ್ಯರು ಶ್ರೀಶೈಲ ಸುಕ್ಷೇತ್ರದ ಶ್ರೀ ಮಲ್ಲಿಕಾರ್ಜುನ ಲಿಂಗದಿಂದ ಮಹಾಶಿವರಾತ್ರಿಯ ಪರ್ವದಿನದಂದು ಪ್ರಾದುರ್ಭವಿಸಿದರು. ಇವರು ಕೃತಯುಗದಲ್ಲಿ ಚತುರಕ್ಷರ ಶಿವಾಚಾರ್ಯರೆಂದು, ತ್ರೇತಾಯುಗದಲ್ಲಿ ಚತುರ್ವಕ್ತ್ರ ಶಿವಾಚಾರ್ಯರೆಂದು, ದ್ವಾಪರಯುಗದಲ್ಲಿ ಧೇನುಕರ್ಣ ಶಿವಾಚಾರ್ಯರೆಂದು ಮತ್ತು ಕಲಿಯುಗದಲ್ಲಿ ಜಗದ್ಗುರು ಪಂಡಿತಾರಾಧ್ಯ ಶಿವಾಚಾರ್ಯರೆಂಬ ಅಭಿದಾನಗಳಿಂದ ವಿಖ್ಯಾತರಾಗಿ ಲೋಕಕಲ್ಯಾಣ ಕಾರ್ಯವನ್ನು ಮಾಡಿದರು. ಆಯಾಕಾಲದಲ್ಲಿ ಧರೆಯ

ಮೇಲೆ ಲಿಂಗಸಂಜಾತರಾಗಿ ಕಾಣಿಸಿಕೊಂಡ ಈ ಶ್ರೀಪೀಠದ ಜಗದ್ಗುರುಗಳು ಸಂತಪ್ತರ ಬಾಳಿಗೆ ಸಂಜೀವಿನಿಯಾದರು. ಪರಮಪೂಜ್ಯರು ಅಸಂತುಷ್ಟರನ್ನು ಸಂತುಷ್ಟರನ್ನಾಗಿಸಿದರು. ಅನವಧಾನಿಗಳನ್ನು ಅವಧಾನಿಗಳನ್ನಾಗಿಸಿದರು, ಅತೃಪ್ತರನ್ನು ತೃಪ್ತರನ್ನಾಗಿಸಿದರು. ಆಚಾರ–ವಿಚಾರಭೂಯಿಷ್ಠವಾದ ಶ್ರೀ ಮದ್ವಿಮಲ ವೀರಶೈವ ಮಹಾಮತವನ್ನು ಸಂಸ್ಥಾಪಿಸುವುದರ ಜೊತೆಗೆ ಅದನ್ನು ನಾಡು–ನಾಡುಗಳಲ್ಲಿ ಅಲೆದು ಪ್ರಚಾರಿಸಿದರು. ಅಧರ್ಮಕ್ಕೆ ಅಂತಕಪ್ರಾಯರಾದ ಇವರು ಧರ್ಮವನ್ನು ಮನೆ ಮನೆಗೆ ಕರೆದೊಯ್ದರು. ಎಚ್ಚರ ತಪ್ಪಿದವರನ್ನು ಎಚ್ಚರಿಸಿದರು. ಘೋರ–ಘನಘೋರರರನ್ನು ತಮ್ಮ ಜ್ಞಾನ ಹಾಗೂ ತಪಸ್ಸಿನ ದಿವ್ಯ ತೇಜದಿಂದ ಕರುಣಾಳುಗಳನ್ನಾಗಿ ಪರಿವರ್ತಿಸಿದರು. ಜನರ ಭಾವ–ಭಾವನೆಗಳನ್ನು ಅರ್ಥೈಸಿಕೊಂಡು ಅವರಲ್ಲಿ ಅರಿವಿನ ಶುದ್ಧ ಬೆಳಗನ್ನು ತುಂಬಿದರು. ಇವರ ಕೃಪೆಯಿಂದ ಜನರ ಆಧ್ಯಾತ್ಮಿಕ ಪ್ರಗತಿಗೆ ಅಡ್ಡಿಯನ್ನುಂಟು ಮಾಡಿದ್ದ 'ಮೋಹ–ಮೋಡ'ಗಳು ಚದುರಿ ಹೋದವು. ಜ್ಞಾನಸೂರ್ಯನ ಬೆಳಕು ಜನರ 'ಭಾವ–ಗರ್ಭ'ವನ್ನು ತುಂಬಿ ನಿಂತುಕೊಂಡಿತು. ಸೂರ್ಯಪೀಠದ ಪೀಠಾಧೀಶ್ವರರು ತಮ್ಮ ಇತಿಹಾಸವನ್ನು ಇತಿಹಾಸದ ಪುಟಗಳಲ್ಲಿ ದಾಖಲಿಸುವುದರ ಜೊತೆಯಲ್ಲಿ ವರ್ತಮಾನವನ್ನು ಪ್ರೋತ್ಸಾಹಿಸಿದರು ಮತ್ತು ಭವಿಷ್ಯವನ್ನು ಪ್ರೇರೇಪಿಸಿದರು.

## ಬೆಳೆಯಲಿ ಪರಿಶುದ್ಧ ಮಾನಸಿಕ :

ಪರಮಾರಾಧ್ಯ ಈ ಶ್ರೀಪೀಠದ ಪರಮಪೂಜ್ಯ ಜಗದ್ಗುರುಗಳು ಕೈಯಲ್ಲಿ ನ್ಯಗ್ರೋಧ (ವಟ) ವೃಕ್ಷದ ದಂಡವನ್ನು, ಕಾಂಸ್ಯವರ್ಣದ ಕಮಂಡಲುವನ್ನು ಮತ್ತು ಶ್ವೇತ (ಬಿಳಿ) ವರ್ಣದ ಧ್ವಜವನ್ನು ಹಿಡಿದು ಸಂಚರಿಸುತ್ತಾರೆ. **ಈ ಬಣ್ಣವು ಪರಿಶುದ್ಧತೆಯ ಪ್ರತೀಕ ಮತ್ತು ಶಾಂತಿ–ಸಂಧಾನಗಳ ದ್ಯೋತಕ.** ಈ ಬಣ್ಣವು ನಿಷ್ಕಪಟ ಮನೋಭಾವವನ್ನು ಕೂಡ ಪ್ರತಿನಿಧಿಸುತ್ತದೆ. ಬೆಳ್ಳಗಿರುವುದೆಲ್ಲ ಸರ್ವ ಜನ ಪ್ರಿಯವಾಗಿರುತ್ತದೆ. ಬೆಳ್ಳಗಿರುವುದನ್ನು ಯಾರು ತಾನೆ ಇಷ್ಟ ಪಡುವದಿಲ್ಲ? ಬಿಳಿ, ಬೆಳ್ಳಿ, ಬೆಳಕು ಈ ಎಲ್ಲವೂ ಜನರಿಗೆ ಬೇಕೇಬೇಕು. ನಮ್ಮ ಹೃದಯಗಳು ಶಾಂತವಾಗಿರಬೇಕು. ನಮ್ಮ ಭಾವಗಳು ನಿರ್ಮಲವಾಗಿರಬೇಕು. ವಿಚಾರಗಳು ಪರಿಶುದ್ಧವಾಗಿರಬೇಕು. ಆಗ ಮಾತ್ರ ಲೋಕದಲ್ಲಿ ಶಾಂತಿ ಮತ್ತು ಸಮಾಧಾನಗಳು ಶಾಶ್ವತವಾಗಿ ನೆಲೆನಿಲ್ಲುತ್ತವೆ. ಅಂತಲೇ ಈ ಶ್ರೀಪೀಠದ ಪೀಠಾಚಾರ್ಯರು ತಮ್ಮ ಹಸ್ತದಲ್ಲಿ ಶ್ವೇತ ಧ್ವಜವನ್ನು ಹಿಡಿದು ಪರಿಶುದ್ಧ ಮಾನಸಿಕವನ್ನು ಬೆಳೆಯಿಸಿಕೊಳ್ಳಲು ಕರೆಕೊಡುತ್ತಾರೆ. ಈ ಪೀಠದ ಪೀಠಾಚಾರ್ಯರು ಪಂಚಮಹಾಭೂತಗಳಲ್ಲೊಂದಾದ 'ವಾಯುತತ್ತ್ವ'ದ ಅಧಿಪತಿಗಳು. ವೇದಾಗಮ ಉಪನಿಷತ್ತುಗಳ ಸಾರಸರ್ವಸ್ವವನ್ನು ಅಧ್ಯಯನಿಸಿದ ಇವರದು ಅಥರ್ವಣ

---

ದಕ್ಷಿಣ ಭಾರತದ ಪ್ರತಿಷ್ಠಿತ ರಾಜ್ಯಗಳಲ್ಲೊಂದಾದ ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯಲ್ಲಿ ಶ್ರೀಶೈಲ ಸುಕ್ಷೇತ್ರವಿದೆ. ಈ ಸುಕ್ಷೇತ್ರಕ್ಕೆ ಕರ್ನೂಲು ಮತ್ತು ಆತ್ಮಕೂರು ಇವೆರಡರಿಂದಲೂ ಹೋಗಲು ಸೌಕರ್ಯಗಳಿವೆ

ವೇದ ಪರಂಪರೆ. ಪಂಚಾಕ್ಷರ ಮಂತ್ರದಲ್ಲಿಯ 'ವಾ'ಕಾರ ಇವರ ಬೀಜಮಂತ್ರ. ಪ್ರಮಥ ಗಣರಲ್ಲೊಬ್ಬನಾದ ವೃಷಭನು ಶ್ರೀಶೈಲ ಶ್ರೀಪೀಠದವರ ಗೋತ್ರಪುರುಷ. ಶ್ರೀಶೈಲ ಶ್ರೀಪೀಠಕ್ಕೆ ಸಂಬಂಧಪಟ್ಟವರೆಲ್ಲರೂ ತಮ್ಮದು 'ವೃಷಭ ಗೋತ್ರ'ವೆಂದು ಹೇಳಿಕೊಳ್ಳಬೇಕು. ಈ ಶ್ರೀಪೀಠದ ಭಕ್ತರದು ಮುಕ್ತಾಗುಚ್ಛ ಸೂತ್ರ. ಧೇನುಕರ್ಣರನ್ನು ಗಣಾಧೀಶ್ವರರನ್ನಾಗಿ ಪಡೆದ ಈ ಶ್ರೀಪೀಠದ ಭಕ್ತರೆಲ್ಲರೂ ಧೇನುಕರ್ಣ ಶಾಖೆಯವರಾಗಿರುತ್ತಾರೆ. ಸುಧಾಕುಂಡಾಖ್ಯ ಶ್ರೀ ಮಲ್ಲಿಕಾರ್ಜುನ ಲಿಂಗದಿಂದ ಉದ್ಭವಿಸಿದ ಜಗದ್ಗುರು ಪಂಡಿತಾರಾಧ್ಯರು ಈ ಶ್ರೀಪೀಠದ ಆದಿ ಜಗದ್ಗುರುಗಳು. ಈ ಶ್ರೀಪೀಠವನ್ನು ಸೂರ್ಯಪೀಠ, ಪರ್ವತಪೀಠ, ಶ್ರೀಗಿರಿ ಪೀಠ, ಶ್ರೀಮದ್ಗಿರಿರಾಜ ಪೀಠ, ಶ್ರೀಶೈಲ ಪೀಠ, ಸೂರ್ಯಸಿಂಹಾಸನ........... ಎಂಬಿತ್ಯಾದಿ ಹೆಸರುಗಳಿಂದ ಕರೆಯುತ್ತಾರೆ. ಈ ಶ್ರೀಪೀಠದ ಪೀಠಾಧೀಶ್ವರರನ್ನು 'ಸೂರ್ಯ ಸಿಂಹಾಸನಾಧೀಶ್ವರ'ರೆಂದು ತುಂಬು ಹೃದಯದಿಂದ ಭಜಿಸಿ ಪೂಜಿಸುತ್ತಾರೆ. ವಿಪತ್ತು–ಆಪತ್ತುಗಳ ಅಟ್ಟಹಾಸಕ್ಕೆ ಸೊಪ್ಪು ಹಾಕದೆ ಈ ಶ್ರೀಪೀಠವು ಅಂದಿನಿಂದ ಇಂದಿನವರೆಗೂ ತನ್ನ ಕೀರ್ತಿಯನ್ನು ಅಬಾಧಿತವಾಗಿ ಮತ್ತು ಅವ್ಯಾಹತವಾಗಿ ವಿಸ್ತರಿಸಿಕೊಂಡು ಬಂದಿದೆ. ಪೂರ್ವಾಚಾರ್ಯರ ಆಶೀರ್ವಾದದ ಬಲದಿಂದ ಮತ್ತು ವರ್ತಮಾನ ಪೀಠಾಧೀಶ್ವರರ ಸಕುಶಲ ಮಾರ್ಗದರ್ಶನ ಮತ್ತು ಉಸ್ತುವಾರಿಯಿಂದಾಗಿ ಬಂದೆರಗಿದ ಅಡೆತಡೆಗಳು ತಮ್ಮಷ್ಟಕ್ಕೆ ತಾವೇ ಹಿಂದೆ ಸರಿದುಕೊಳ್ಳುತ್ತವೆ. ಈ ಶ್ರೀಪೀಠದ 'ಕೀರ್ತಿಕಾಯ'ವು ಉಕ್ಕಿನ ಕೋಟೆಯಂತಿದೆ. ಯಾವ ಅಸ್ತ್ರ–ಶಸ್ತ್ರಗಳು, ಆರೋಪ–ಪ್ರತ್ಯಾರೋಪಗಳು ಅದನ್ನು ಭೇದಿಸಲಾರವು.

## ಪಣ್ಯಪ್ರಿಯರೇ ಪುಣ್ಯಪ್ರಿಯರಾಗಿ :

ಶ್ರೀಶೈಲ ಶ್ರೀಪೀಠದ ಇತಿಹಾಸವು ಸಮೃದ್ಧವಾಗಿದೆ. ಜ್ಞಾನ, ವೈರಾಗ್ಯ ಮತ್ತು ತಪಕ್ಷೇತ್ರಗಳಲ್ಲಿ ಅಹೋಬಲಸಂಪನ್ನರಾದ ಜಗದ್ಗುರುಗಳಿಂದ ಈ ಶ್ರೀಪೀಠದ ಇತಿಹಾಸವು ತುಂಬಿ ನಳನಳಿಸುತ್ತದೆ. ಆಯಾ ಯುಗಗಳಲ್ಲಿ ಬೇರೆ ಬೇರೆ ನಾಮಗಳಿಂದ ಪ್ರಾದುರ್ಭವಿಸಿದ ಜಗದ್ಗುರುಗಳು ಧರ್ಮ–ಸಂಸ್ಥಾಪನೆ ಮತ್ತು ಧರ್ಮಪ್ರಸಾರಕ್ಕಾಗಿ ಒಂದೊಂದು ಕ್ಷಣವನ್ನು ಕೂಡ ವ್ಯರ್ಥವಾಗಿ ವ್ಯಯಿಸದೆ ನಿರಂತರವಾಗಿ ವಿಶ್ವಕಲ್ಯಾಣ ಕಾರ್ಯದಲ್ಲಿ ತೊಡಗಿಕೊಂಡಿದ್ದಾರೆ. ತಮ್ಮಲ್ಲಿನ 'ಬೋಧಗಂಗೆ'ಯನ್ನು ಜನರ ಭಾವಕ್ಷೇತ್ರದ ಮೇಲೆ ಹನಿಸಿ ಮತ್ತು ಹರಿಸಿ ಅವರನ್ನು ಉದ್ಧರಿಸಿದ್ದಾರೆ. ಬದ್ಧರನ್ನು ಬುದ್ಧರನ್ನಾಗಿಸಿದ್ದಾರೆ. ಪತಿತರನ್ನು ಪುನೀತರನ್ನಾಗಿಸಿದ್ದಾರೆ. ಪಣ್ಯಪ್ರಿಯರನ್ನು ಪುಣ್ಯಪ್ರಿಯರನ್ನಾಗಿಸಿದ್ದಾರೆ. ಅರ್ಥಾರ್ಥಿಗಳನ್ನು ಜ್ಞಾನಾರ್ಥಿಗಳನ್ನಾಗಿ ಮಾಡಿದ್ದಾರೆ. ಜನಗಳ ಆಲೋಚನೆಯ ದಿಕ್ಕನ್ನೇ ಬದಲಾಯಿಸಿದ ಕೀರ್ತಿ ಇವರದು. ಜನರ ಭಾವಗಳನ್ನು ಮೃದುಗೊಳಿಸುವುದರ ಜೊತೆಯಲ್ಲಿ ಅವರ ಮನಗಳನ್ನು ಹದುಳವಾಗಿಸಿದವರು ಇವರು.

## ಕರುಣೆಗೆ ಕರುಣೆಯ ಆಶೀರ್ವಾದ :

ಪಂಚಾಕ್ಷರ ಮಹಾಮಂತ್ರದ ಪಾಪಹಾರಿಣಿ ಶಕ್ತಿ (ಅಘನಾಶಿನಿ ಶಕ್ತಿ)ಯನ್ನುಲ ಲೋಕಕ್ಕೆ ಪರಿಚಯಿಸಿದ ಮಹಾನುಭಾವ **ಸಾನಂದ ಮಹರ್ಷಿಗೆ** ಶಿವಾದ್ವೈತ ಸಿದ್ಧಾಂತವನ್ನು ಬೋಧಿಸಿ ಆತನನ್ನು ವೀರಶೈವ ಧರ್ಮಾನುಯಾಯಿಯನ್ನಾಗಿ ಮಾಡಿದ ಕೀರ್ತಿ ದ್ವಾಪರಯುಗದ ಶ್ರೀ ಜ. **ಧೇನುಕರ್ಣ ಶಿವಾಚಾರ್ಯ**ರದಾಗಿದೆ. ನರಕಕ್ಕೆ ಹೋಗಿ ಪಂಚಾಕ್ಷರ ಮಹಾಮಂತ್ರ ಹೇಳಿ ಅಲ್ಲಿರುವ ನಾರಕಿಗಳನ್ನೆಲ್ಲ ಉದ್ಧರಿಸಿದ ಪರಮ ಕರುಣಾಳು ಸಾನಂದ ಮಹರ್ಷಿಯ ಮೇಲೆ ತಮ್ಮ ಕೃಪಾದೃಷ್ಟಿ ಹಾಗೂ ಜ್ಞಾನವೃಷ್ಟಿಯನ್ನು ಕರೆದು ಆತನು ತಾನಾಗಿಯೇ ಇವರ ಅನುಗ, ಅನುಯಾಯಿಯಾಗಿ ಅನುಸರಿಸುವಂತೆ ಮಾಡಿ ಸಾನಂದ ಮುನಿಯ ಜೀವನದಲ್ಲಿ ಆನಂದವು ಯಾವತ್ತೂ ಸ್ಥಾಯಿಯಾಗಿ ನಿಂತುಕೊಳ್ಳುವ ಹಾಗೆ ಮಾಡಿದರು. ಜಗದ್ಗುರು ಧೇನುಕರ್ಣ ಶಿವಾಚಾರ್ಯರು **ಕರುಣಾಮಯಿ ಸಾನಂದನ ಗುರುಗಳೆಂದಾದ ಮೇಲೆ ಪರಮ ಕರುಣಾಮಯಿಗಳಲ್ಲದೆ ಮತ್ತೇನು ?**

## ಭವಿ ಭಕ್ತನಾದ :

ಈ ಶ್ರೀಪೀಠದ ಮಹಾಮಹಿಮಾಸಂಪನ್ನರೂ ಪರಮ ತಪಸ್ವಿಗಳೂ ಮತ್ತು ಶಿವಯೋಗನಿಷ್ಠರಾದ ಜ. ಶ್ರೀ **ಸದಾನಂದ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳು** ಶ್ವೇತನೆಂಬ ರಾಜನ ಮಗನಾದ ಪಿಂಗಳನ ಮಹಾರೋಗವನ್ನು ಕಳೆದು ಆತನನ್ನು ಉದ್ಧರಿಸಿದರು. ಮಹಾರೋಗಮುಕ್ತನಾದ ಆತನಿಗೆ ಇಷ್ಟಲಿಂಗ, ರುದ್ರಾಕ್ಷಿ, ಭಸ್ಮ, ಮಂತ್ರಾದಿಗಳನ್ನು ಕೊಟ್ಟು ಆತನನ್ನು ವೀರಶೈವನನ್ನಾಗಿಸಿ ಅಂಗ–ಕುಟುಂಬದಿಂದ ಲಿಂಗ–ಕುಟುಂಬಕ್ಕೆ ತಂದರು. ಭವಿಯನ್ನು ಭಕ್ತನನ್ನಾಗಿಸಿ ಆತನು 'ಲಿಂಗಸಂಗಿ'ಯಾಗುವಂತೆ ಮಾಡಿದರು.

## ಅಗ್ನಿಸ್ತಂಭನಾದಿ ....... :

ಶ್ರೀಶೈಲ ಶ್ರೀಪೀಠದ ಇತಿಹಾಸದಲ್ಲಿ '**ಪಂಡಿತತ್ರಯ**'ರೆಂದೇ ಖ್ಯಾತರಾದ ಮತ್ತು ಆಂಧ್ರ ನಾಡಿನಾದ್ಯಂತ ತಮ್ಮ ವಿದ್ವತ್ತು ಮತ್ತು ಪಾಂಡಿತ್ಯಗಳಿಂದಾಗಿ ಹೆಸರು ಮಾಡಿದ ಜ. ಶ್ರೀ**ಪತಿ ಪಂಡಿತಾರಾಧ್ಯ**ರು, ಜ. ಶ್ರೀ **ಮಂಚಣ ಪಂಡಿತಾರಾಧ್ಯ**ರು ಹಾಗೂ ಜ. ಶ್ರೀ **ಮಲ್ಲಿಕಾರ್ಜುನ ಪಂಡಿತಾರಾಧ್ಯ**ರು ಆಂಧ್ರ, ತಮಿಳುನಾಡು, ಕರ್ನಾಟಕ ಇತ್ಯಾದಿ ಪ್ರಾಂತಗಳಲ್ಲಿ ಸಂಚರಿಸಿ ತಮ್ಮ ಜ್ಞಾನದ ವರ್ಚಸ್ಸಿನಿಂದ ಹಾಗೂ ತಪೋಬಲದಿಂದ ವೀರಶೈವ ಧರ್ಮದ ಪರಿಮಳವು ಅಲ್ಲೆಲ್ಲ ತುಂಬಿಕೊಳ್ಳುವಂತೆ ಮಾಡಿದರು. ೧೧ನೆಯ ಶತಮಾನದಲ್ಲಿದ್ದ ಶ್ರೀ ಜ. ಶ್ರೀ**ಪತಿ ಪಂಡಿತಾರಾಧ್ಯ**ರು

ವಿಜಯವಾಡಾದಲ್ಲಿ ಪರವಾದಿಗಳನ್ನು ಜಯಿಸಿ ಅವರ ಅಗ್ನಿಹೋತ್ರಾದಿಗಳಿಗೆ ಅಗತ್ಯವಾದ ಅಗ್ನಿಯನ್ನು ರೇಷ್ಮೆ ಬಟ್ಟೆಯಲ್ಲಿ ಕಟ್ಟಿ ಶಮೀವೃಕ್ಷ (ಬನ್ನೀ ಮರ)ಕ್ಕೆ ತೂಗು ಹಾಕಿ 'ಅಗ್ನಿಸ್ತಂಭನ' ಮಾಡಿದ ಕಥೆ ಸರ್ವಜನಶ್ರುತವಾಗಿದೆ. ೧೩ನೆಯ ಶತಮಾನದಲ್ಲಿದ್ದ ಶ್ರೀ ಜ. **ಈಶ್ವರ ಪಂಡಿತಾರಾಧ್ಯ ಶಿವಾಚಾರ್ಯರ** ಕಾಲದಲ್ಲಿ ಅಂದಿನ ರಾಜ ಮಹಾರಾಜರುಗಳು ಪತ್ನಿ–ಪರಿವಾರ ಸಮೇತರಾಗಿ ಬಂದು ಅವರಿಗೆ ಗುರುಕಾಣಿಕೆಯನ್ನು ಮತ್ತು ದಾನ ದತ್ತಿಗಳನ್ನು ಅರ್ಪಿಸುತ್ತಿರುವ ವಿಷಯಗಳನ್ನು ಶಿಲೆಗಳು ಮತ್ತು ಶಿಲಾಶಾಸನಗಳು ತಮ್ಮ ಒಡಲಲ್ಲಿ ದಾಖಲಿಸಿಕೊಂಡಿವೆ. ಶ್ರೀ ಜ. **ಮಲ್ಲಿಕಾರ್ಜುನ ಪಂಡಿತಾರಾಧ್ಯ ಶಿವಾಚಾರ್ಯರು** ಅಂದು ಆಂಧ್ರ ಭಾಷೆಯಲ್ಲಿ (ತೆಲಗು) ಎತ್ತಿದ ಕೈ. ಕನ್ನಡದಲ್ಲೂ ಅವರಿಗೆ ಧಾರಾಳವಾಗಿ ಪ್ರಭುತ್ವವಿತ್ತು. ಅನೇಕ ಅಷ್ಟಕ, ಶತಕ, ಸ್ತುತಿ, ಸ್ತೋತ್ರಗಳನ್ನು ರಚಿಸಿದ ಕೀರ್ತಿ ಅವರದು. ಇವರ ಕಾಲದಲ್ಲಿ ಶ್ರೀಪೀಠದ ಕೀರ್ತಿಗೆ ವೈಭವದ ಕಳೆ ಸೇರಿತ್ತು. ೧೪ನೆಯ ಶತಮಾನದಲ್ಲಿದ್ದ ಶ್ರೀ ಜ. **ಶ್ರೀಲಿಂಗ ಚಕ್ರೇಶ್ವರ ಪಂಡಿತಾರಾಧ್ಯ ಶಿವಾಚಾರ್ಯರು** ವಿಜಯನಗರದ ರಾಜವಂಶೀಯನಾದ ವಿರೂಪಾಕ್ಷ ಮಹಾರಾಜನಿಗೆ ಚಿರಂಜೀವಿಯಾಗಿ ಬಾಳೆಂದು ಹರಸಿ ಅವನ ಔದಾರ್ಯವನ್ನು ಆಶೀರ್ವದಿಸಿದರು. ಈ ವಿಧವಾಗಿ ಈ ಪರಮಪಾವನ ಪೀಠಪರಂಪರೆಯಲ್ಲಿ ಶ್ರೀ ಜ. **ಗಜಕರ್ಣ ಶಿವಾಚಾರ್ಯರು**, ಶ್ರೀ ಜ. **ಸಂಗಮ ಶಿವಾಚಾರ್ಯರು**, ಶ್ರೀ ಜ. **ಉಮಾಧವ ಶಿವಾಚಾರ್ಯರು**, ಶ್ರೀ ಜ. **ಗೋಕರ್ಣ ಶಿವಾಚಾರ್ಯರು**, ಶ್ರೀ ಜ. **ಪಟ್ಟದ ಪ್ರಮಥೇಶ್ವರ ಶಿವಾಚಾರ್ಯರು**, ಶ್ರೀ ಜ. **ಮುಕ್ತಿಮುನಿ ಶಿವಾಚಾರ್ಯರು**, ಶ್ರೀ ಜ. **ಅರುಣಾಚಲ ಶಿವಾಚಾರ್ಯರು** . . . ಇವರೇ ಮೊದಲಾದ ಜಗದ್ಗುರುಗಳು ಶ್ರೀಪೀಠದ ಅಭ್ಯುದಯಕ್ಕಾಗಿ ಅಹೋರಾತ್ರಿ ಪರಿಶ್ರಮಿಸಿದ್ದಾರೆ. ಕದಂಬ ಹಾಗೂ ವಿಜಯನಗರದ ಅರಸು ಮನೆತನಗಳು ಈ ಪೀಠಾಚಾರ್ಯರ ಮಹಿಮಾತಿಶಯಕ್ಕೆ ತಲೆಬಾಗಿ ಅವರನ್ನು ತಮ್ಮ ಆರಾಧ್ಯ ದೈವವನ್ನಾಗಿಸಿಕೊಂಡರು. ಈ ಶ್ರೀಪೀಠದ ಬಹಳ ಜನ ಜಗದ್ಗುರುಗಳ ಹೆಸರುಗಳು ಐತಿಹಾಸಿಕವಾಗಿ ದಾಖಲಾಗಿಲ್ಲ. ಅಜ್ಞಾತವಾದ ಇತಿಹಾಸದ ಶ್ರೀಮಂತ–ಗರ್ಭವನ್ನು ಸೇರಿದೆ ಅವರ ಇತಿಹಾಸ. ಆದಾಗ್ಯೂ ಅವರ ಕೃತಿ ಮತ್ತು ಸತ್ಕೃತಿಗಳ ಫಲವಾದ ಶ್ರೀಪೀಠದ ಕೀರ್ತಿಯು ಯಾವ ಬಾಧೆಯೂ ಇಲ್ಲದೆ ತಲೆಯೆತ್ತಿ ನಿಂತಿದೆ. ಜಗದ್ಗುರುಗಳೆಲ್ಲರ ತಪಸ್ಸಿನ ಬಲುಭದ್ರವಾದ ತಳಹದಿಯ ಮೇಲೆ ಶ್ರೀಪೀಠದ 'ಕೀರ್ತಿಸ್ತಂಭ'ವು ಬಲು ಗಟ್ಟಿಯಾಗಿ ನಿಂತುಕೊಂಡಿದೆ.

## ಶ್ರೀಶೈಲದ 'ಸ್ಫೂರ್ತಿ' ಸಂಜೀವಿನಿ :

ಶ್ರೀಶೈಲ ಶ್ರೀಪೀಠದ ಶ್ರೀಮಂತ ಇತಿಹಾಸದಲ್ಲಿ **'ಸುವರ್ಣಯುಗ'**ವನ್ನು ಬರೆದು ದಾಖಲಿಸಿದ ಕೀರ್ತಿ **ಲಿಂ. ಜ. ಶ್ರೀ ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳದು.** ಬಹುಮುಖ ಪ್ರತಿಭಾಸಂಪನ್ನರಾಗಿದ್ದ ಪರಮಪೂಜ್ಯರದು

ಸರ್ವಾಂಗ ಸುಂದರ ವ್ಯಕ್ತಿತ್ವ. ಅವರ ವ್ಯಕ್ತಿತ್ವದಲ್ಲಿ 'ಇಲ್ಲ'ವೆಂಬ ಶಬ್ದಕ್ಕೆ ಬಂದಿರಲು ಆಸ್ಪದವೇ ಇರಲಿಲ್ಲ. ಧಾರ್ಮಿಕ, ಶೈಕ್ಷಣಿಕ, ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಇತ್ಯಾದಿ ರಂಗಗಳಲ್ಲಿ ಅವರ ವ್ಯಕ್ತಿತ್ವ ದುಡಿದಿತ್ತು. ಅಂತಲೇ ಈ ಎಲ್ಲ ರಂಗದವರೊಂದಿಗೆ ಅವರಿಗೆ ಅತ್ಯಂತ ಹತ್ತಿರದ ಒಡನಾಟವಿತ್ತು. ರಾಷ್ಟ್ರಪ್ರೇಮಕ್ಕಾಗಿ ಹೆಸರುಮಾಡಿದ ಅವರ ವ್ಯಕ್ತಿತ್ವದ ಎದುರಿನಲ್ಲಿ ಅಂದಿನ ರಾಷ್ಟ್ರಪತಿ–ಉಪರಾಷ್ಟ್ರಪತಿಗಳಾಗಿದ್ದ ಡಾ. ಬಾಬು ರಾಜೇಂದ್ರ ಪ್ರಸಾದ ಹಾಗೂ ಡಾ. ಎಸ್. ರಾಧಾಕೃಷ್ಣನ್ ರಂಥವರು ತಲೆಬಾಗುತ್ತಿದ್ದರು. ಪರಮಪೂಜ್ಯರು ಸಮಗ್ರ ಶ್ರೀಶೈಲ ಕ್ಷೇತ್ರಕ್ಕೆ 'ಕಾಯಕಲ್ಪ'ವನ್ನು ಒದಗಿಸಿಕೊಟ್ಟ ಕೀರ್ತಿಕಾಯರು. ವ್ಯರ್ಥವಾಗಿ ಹರಿದು ಹೋಗುತ್ತಲಿದ್ದ ಪಾತಾಳಗಂಗೆಯ ನೀರನ್ನು ದುಡಿಸಿಕೊಳ್ಳಲು ಸರಕಾರವನ್ನೇ ಪ್ರೇರೇಪಿಸಿ ಆ ನಿಟ್ಟಿನಲ್ಲಿ ಯಶಸ್ವಿಯಾದ ಧೀಮಂತ ವ್ಯಕ್ತಿತ್ವ ಅವರದು. ಶ್ರೀಶೈಲಕ್ಕೆ ರಹದಾರಿಗಳನ್ನು ನಿರ್ಮಿಸಿ ಶ್ರೀಕ್ಷೇತ್ರದ ಜೊತೆ ಜನತೆಯ ಸಂಪರ್ಕವನ್ನು ಹೆಚ್ಚಿಸಿದವರು ಅವರು. ಶ್ರೀಶೈಲ ಸುಕ್ಷೇತ್ರದ ಅಭಿವೃದ್ಧಿಗಾಗಿ ಹಾಗೂ ವೀರಶೈವ ಮಾನವ ಸಮಾಜದ ಕಲ್ಯಾಣಕ್ಕಾಗಿ ಅವರು ಮಾಡಿರುವುದು ಒಂದೆರಡಲ್ಲ........ ಹತ್ತು ಹಲವು. ಪ್ರತಿಯೊಂದು ರಂಗದಲ್ಲೂ ಅವರಿಗೆ ಅಧಿಕೃತವಾದ ಹಾಗೂ ಪ್ರಮಾಣಬದ್ಧವಾದ ಜ್ಞಾನವಿತ್ತು. ಬಹುಭಾಷಾ ವಿಶಾರದರು, ಸಕಲಶಾಸ್ತ್ರಪಾರಂಗತರು, ಕವಿಗಳು, ವಾಗ್ಮಿಗಳು, ಸಾಹಿತಿಗಳು, ಆಯುರ್ವೇದಮರ್ಮಜ್ಞರು ಆಗಿದ್ದ ಸನ್ನಿಧಿಯವರು ಭಕ್ತ–ಜನತೆಯ ಅತ್ಯಾದರ ಮತ್ತು ಭಕ್ತಿಗಳಿಗೆ ಪಾತ್ರರಾಗಿದ್ದರು. ಪರಮಪೂಜ್ಯರಿಂದಾಗಿ ಶ್ರೀಪೀಠದ 'ಕೀರ್ತಿ ಕ್ಷಿತಿಜ'ವು ಇನ್ನಷ್ಟು ಮತ್ತಷ್ಟು ವಿಸ್ತರಿಸಲ್ಪಟ್ಟಿತು. ಶ್ರೀಪೀಠದ 'ಕೀರ್ತಿಕಾಯ'ವು ಬಲಿಷ್ಠವಾಯಿತು. ಪೀಠ ಸುಧಾರಣೆಯನ್ನಷ್ಟೇ ಅಲ್ಲ, ಇಡೀ ಶ್ರೀಶೈಲ ಕ್ಷೇತ್ರವನ್ನೇ ಸುಧಾರಿಸಿದ ಅವರು ಆ ಕ್ಷೇತ್ರದಲ್ಲಿ ಹೊಸ ಹೊಸ ಯೋಜನೆಗಳು ಹುಟ್ಟಿಕೊಂಡು ಕಾರ್ಯರೂಪಕ್ಕಿಳಿಯುವಂತೆ ಮಾಡಿದರು.

## ಹತ್ತರ ಜೊತೆಗಿನ ಹನ್ನೊಂದಲ್ಲ :

ಪರಮಪೂಜ್ಯ ಸನ್ನಿಧಿಯವರು ಇನ್ನೊಂದು ದೃಷ್ಟಿಯಿಂದಲೂ ಗೌರವಕ್ಕೆ ಪಾತ್ರರು. ಅವರ ಮುಂದಾಲೋಚನೆ ಮತ್ತು ಆಧುನಿಕ ವಿಚಾರಧಾರೆ ಮೆಚ್ಚಿಕೊಳ್ಳುವಂತಿವೆ. ತಾವಿರುವಾಗಲೇ ತಮ್ಮ 'ಉತ್ತರಾಧಿಕಾರಿ'ಗಳನ್ನು ಆಯ್ಕೆಮಾಡಿ ಅವರನ್ನು 'ಉತ್ತರಾಧಿಕಾರಿ' ಎಂದು ಘೋಷಿಸಿ ಸುಮಾರು ವರುಷಗಳವರೆಗೆ ಅವರಿಗೆ ಪೀಠಾಚಾರ್ಯರ ಹೊಣೆ–ಹೊಣೆಗಾರಿಕೆಗಳ ಕುರಿತು ತರಬೇತಿ ನೀಡಿ ಅನಂತರ ತಾವು ಇನ್ನೂ ಸಶಕ್ತ ಆಯುರಾರೋಗ್ಯಗಳನ್ನು ಪಡೆದುಕೊಂಡಿರುವಾಗಲೇ ತಮ್ಮ ಉತ್ತರಾಧಿಕಾರಿಗಳಿಗೆ 'ಜಗದ್ಗುರು ಪಟ್ಟಾಭಿಷೇಕ'ವನ್ನು ಮಾಡಿ ಆನಂದಿಸಿದ ಅಪೂರ್ವ ವ್ಯಕ್ತಿತ್ವ ಅವರದು. ಅವರ ಈ ಪ್ರಗತಿಪರ–ವಿಚಾರಧಾರೆಯ ಮುಂದೆ ಯಾರ ತಲೆಯಾದರೂ ಬಾಗಲೇಬೇಕು.

ಈ ಮೂಲಕ ಅವರು ತಾವೆಷ್ಟು ಆಧುನಿಕರು ಮತ್ತು ಪ್ರಗತಿಪರರು ಎಂಬುವದನ್ನು ಸಮಾಜಕ್ಕೆ ತೋರಿಸಿಕೊಟ್ಟರು. ಅಂತಲೇ ಅವರದು ಸರ್ವಾಂಗ ಸುಂದರವಾದ 'ಪರಿಪೂರ್ಣ ವ್ಯಕ್ತಿತ್ವ'ವೆಂದು ಹೇಳಿರುವುದು. ಶ್ರೀಶೈಲ ಶ್ರೀಪೀಠದ 'ಕೀರ್ತಿ–ಪರಂಪರೆ'ಯಲ್ಲಿಯೇ ಅವರೊಂದು ಮೈಲಿಗಲ್ಲು. ಶ್ರೀಶೈಲ ಶ್ರೀಪೀಠ ಮತ್ತು ವೀರಶೈವ ಮಹಾಜನತೆ ಅವರ ವ್ಯಕ್ತಿತ್ವದಿಂದ ಉಂಟಾದ ಸಾನಂದ–ರೋಮಾಂಚನದಿಂದ ಎಂದೂ ಹೊರಬರುವಂತೆಯೇ ಇಲ್ಲ; ಅಷ್ಟೊಂದು ಆಳವಾಗಿ ಮತ್ತು ಭದ್ರವಾಗಿ ಇಳಿದಿದ್ದಾರೆ ಪರಮಪೂಜ್ಯ ಸನ್ನಿಧಿಯವರು ಜನ ಮಾನಸದಲ್ಲಿ ಮತ್ತು ಭಕ್ತರ ಭಾವ–ಕ್ಷೇತ್ರದಲ್ಲಿ !!

## ಶ್ರೀಶೈಲ ಚೈತನ್ಯಶ್ರೀ :

ಉದಾತ್ತ ಇತಿಹಾಸವನ್ನು ಹೊಂದಿದ ಶ್ರೀಶೈಲ ಶ್ರೀಪೀಠದ **'ವರ್ತಮಾನ' ಮತ್ತು 'ಇಂದು' ಪರಮಪೂಜ್ಯ ಜಗದ್ಗುರು ಉಮಾಪತಿ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳವರು.** ಪರಮಪೂಜ್ಯ ಸನ್ನಿಧಿಯವರದು ಮುಕ್ತ–ವಿಚಾರಧಾರೆ ಮತ್ತು ಪಾರದರ್ಶಕ ಹೃದಯ. ಪ್ರಾಂಜಲ ಮನಸ್ಸಿನ ಅವರಲ್ಲಿ ಸ್ವಚ್ಛ ಭಾವ–ಭಾವನೆಗಳು ತುಂಬಿಕೊಂಡಿವೆ. ಅವರೆಂದೂ ತಮ್ಮ ಅನಿಸಿಕೆಗಳಿಗೆ ಅಜ್ಞಾತವಾಸದ ಶಿಕ್ಷೆ ಕೊಡುವುದಿಲ್ಲ. ಸಂಕೋಚ ಹಾಗೂ ದ್ವಂದ್ವಗಳ ಮನರಂಜಿಸುವ ಸ್ವಭಾವದವರಲ್ಲ ಅವರು. ತಮ್ಮ ನಿಲುವನ್ನು ಮತ್ತು ಅಭಿಪ್ರಾಯಗಳನ್ನು ಖಡಾಖಂಡಿತವಾಗಿ ಪ್ರತಿಪಾದಿಸುವ ಸನ್ನಿಧಿಯವರು ಜನತೆಯ ಅಂತರಂಗದಲ್ಲಿ ವಿರಾಜಮಾನರಾಗಿದ್ದಾರೆ. ಪರಮಪೂಜ್ಯರು ತಮ್ಮ ಪ್ರತಿಭಾಪೂರ್ಣ ಕರ್ತೃತ್ವ ಹಾಗೂ ವಕ್ತೃತ್ವ ಶಕ್ತಿಯಿಂದ ವೀರಶೈವ ಸಮಾಜವನ್ನು ಹಾಗೂ ಭಕ್ತ–ಜನ–ಮಾನಸವನ್ನು ಅತ್ಯಂತ ಹತ್ತಿರದಿಂದ ಓದಿದ್ದಾರೆ. ವೈಯಕ್ತಿಕ ಆಸೆ–ಆಕಾಂಕ್ಷೆಗಳಿಗೆ ಸಂಪೂರ್ಣವಾಗಿ ನೀರುಬಿಟ್ಟು ಸಾರ್ವಜನಿಕ ಬದುಕಿಗೆ ತಮ್ಮನ್ನೇ ತಾವು ಇಡಿಯಾಗಿ ಸಮರ್ಪಿಸಿಕೊಂಡ ಅವರು ಲೋಕಕಲ್ಯಾಣಕ್ಕಾಗಿ ದಧೀಚಿಯಂತೆ ತಮ್ಮ 'ವೈಯಕ್ತಿಕ'ವನ್ನೇ ಅಳಿಸಿಹಾಕಿದ್ದಾರೆ.

## 'ಕೀರ್ತಿಕಾಯ'ಕ್ಕೆ ಕಾಯಕಲ್ಪ :

ಮಹಾಸ್ವಾಮಿಗಳವರು ತಮ್ಮ ಪೂರ್ವಾಚಾರ್ಯರಾದ ಲಿಂ. ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳು ಕಟ್ಟಿದ ಶ್ರೀಶೈಲ ಶ್ರೀಪೀಠದ 'ಕೀರ್ತಿಕಾಯ'ಕ್ಕೆ ಕಾಯಕಲ್ಪವನ್ನು ಒದಗಿಸಿದ ಖ್ಯಾತಿಯನ್ನು ತಮ್ಮದನ್ನಾಗಿಸಿಕೊಂಡಿದ್ದಾರೆ. ಸಮಾಜ ಕಲ್ಯಾಣ ಹಾಗೂ ಧರ್ಮಜಾಗೃತಿಯ ಕಾರ್ಯದಲ್ಲಿ ಅವರೆಂದೂ ಆಯಾಸ–ಆಲಸ್ಯಗಳ ಮನರಂಜಿಸಿಲ್ಲ. ತಮ್ಮ ಒಂದೊಂದು ನಿಮಿಷವನ್ನು ಕೂಡ ಪರಮಪೂಜ್ಯರು ಧರ್ಮಜಾಗೃತಿಗಾಗಿ ಹಾಗೂ ಸಮಾಜಸೇವೆಗಾಗಿ

ವಿನಿಯೋಗಿಸುತ್ತಲಿದ್ದಾರೆ. ಪಾದರಸದಂತೆ ಯಾವತ್ತೂ ಚೈತನ್ಯಶೀಲರಾಗಿರುವ ಇವರ ಬಳಿಬರಲು ಮತ್ತು ಬಂದಿರಲು ಆಲಸ್ಯ–ಆಯಾಸಗಳು ಹಾಗೂ ನಿದ್ರೆ–ನಿಟ್ಟುಸಿರುಗಳು ನಾಚಿಕೊಳ್ಳುತ್ತವೆ. ಸಮಾಜದ ಸರ್ವತೋಮುಖ ಪ್ರಗತಿಗಾಗಿ ಅವರು ತಮ್ಮ ವ್ಯಕ್ತಿತ್ವವನ್ನು ಸಾಕಷ್ಟು ದುಡಿಸಿದ್ದಾರೆ. ಅವರ ಕರ್ತೃತ್ವಶಕ್ತಿಯು ಅನೇಕ ವಿಧಾಯಕ ಕಾರ್ಯಗಳನ್ನು ಮಾಡುವ ಮೂಲಕ ಈಗಾಗಲೇ ಧಾರಾಳವಾಗಿ ಮಾತನಾಡಿದೆ. ಪರಮಪೂಜ್ಯರ ಸಾಧನೆಗಳು ಹಿಮಾಲಯವಾಗಿ ಬೆಳೆದು ನಿಂತುಕೊಂಡಿವೆ. ಪರಮಪೂಜ್ಯರು ಮಾಡಬೇಕೆಂದು ಅಂದುಕೊಂಡ ಕೆಲಸ–ಕಾರ್ಯಗಳನ್ನು ಮಾಡಿ ಮುಗಿಸಿದ್ದಾರೆ. ಆಗುಮಾಡಬೇಕೆಂದುದನ್ನು ಆಗಲೇ ಆಗುಮಾಡಿದ್ದಾರೆ. ಬೇಗ ಮಾಡಬೇಕೆಂದುದನ್ನು ಬೇಗನೆ ಮಾಡಿದ್ದಾರೆ. ವಿಳಂಬ–ನೀತಿಗೆ ಸೊಪ್ಪು ಹಾಕುವದು ಮಹಾಸನ್ನಿಧಿಯವರಿಗೆ ಗೊತ್ತೇ ಇಲ್ಲ. ಸಮಯವು ಯಾರ ಪ್ರತೀಕ್ಷೆಯನ್ನೂ ಮಾಡುತ್ತ ನಿಂತುಕೊಳ್ಳುವದಿಲ್ಲ ಎಂಬ ಶಾಶ್ವತ ಸತ್ಯದ ಅರಿವಿರುವ ಅವರು ಸಮಯವನ್ನು ಸರಿಯಾಗಿ ಹಾಗೂ ಸಮಂಜಸವಾಗಿ ಉಪಯೋಗ ಮಾಡಿಕೊಳ್ಳುತ್ತಾರೆ. ಅವರದು ಕುತೂಹಲಕ್ಕೆ ಒಳಗು ಮಾಡುವ ವ್ಯಕ್ತಿತ್ವ. ಅವರ ಸಾಮೀಪ್ಯಕ್ಕೆ ಬಂದವರೆಲ್ಲ ಅವರನ್ನು ಇನ್ನಷ್ಟು ಮತ್ತಷ್ಟು ಹತ್ತಿರದಿಂದ ತಿಳಿಯಬೇಕೆಂಬ ಕುತೂಹಲಕ್ಕೆ ಒಳಗಾಗುತ್ತಾರೆ.

**ಪರಮಪೂಜ್ಯರ ಜೀವನದತ್ತ ವಿಹಂಗಮ–ನೋಟವನ್ನು ಹಾಯಿಸಿದಾಗ ಅವರು ಎಷ್ಟೊಂದು ಸಶಕ್ತ ಹಾಗೂ ಸಮರ್ಥ ಬದುಕನ್ನು ಬದುಕಿದ್ದಾರೆ ಎಂಬುವುದು ನಮ್ಮಗಳ 'ಗಮನ'ದ 'ಗಮನ'ಕ್ಕೆ ವಿಷಯವಾಗದೇ ಉಳಿಯದು.**

## ಮೊದಲ ಹೆಜ್ಜೆಗಳು :

ಪರಮಪೂಜ್ಯ ಜಗದ್ಗುರು ಮಹಾಸನ್ನಿಧಿಯವರು ಬಿಜಾಪುರ ಜಿಲ್ಲೆಯ ಬಸವನ ಬಾಗೇವಾಡಿ ಗ್ರಾಮದಲ್ಲಿ ದಿನಾಂಕ : ೧೦–೪–೧೯೪೪ರಂದು ಜನಿಸಿದರು. ವೇ. ಮೂ. ಸಂಗಯ್ಯನವರು ಹಾಗೂ ಸೌ. ಶಿವಲಿಂಗಮ್ಮನವರು ಪರಮಪೂಜ್ಯರ ಮಾತಾಪಿತರುಗಳು. ಬಾಗೇವಾಡಿ ಗ್ರಾಮದ ಆರಾಧ್ಯ ಮಾಹೇಶ್ವರ ಕುಟುಂಬದಲ್ಲಿ ಜನಿಸಿದ ಪೂಜ್ಯರು ತಮ್ಮ ತಾತಂದಿರಾದ ವೇ. ಮೂ. ವಿರೂಪಾಕ್ಷಯ್ಯನವರ ಧರ್ಮ ಗರಡಿಯಲ್ಲಿ ಪಳಗತೊಡಗಿದರು. ಬಾಲ್ಯದಲ್ಲಿ ಪೂಜ್ಯರನ್ನು ಎಲ್ಲರೂ ಪ್ರೀತಿಯಿಂದ 'ಪದ್ಮರಾಜ ಸ್ವಾಮಿ' ಎಂದು ಕರೆಯುತ್ತಿದ್ದರು. ಗ್ರಾಮದ ಸಮಸ್ತ ಜನತೆಯ ಸ್ನೇಹ–ಪ್ರೇಮಗಳನ್ನು ಹೊಟ್ಟೆ ತುಂಬ ಉಂಡು ಬೆಳೆದ ಪೂಜ್ಯರು ತಮ್ಮ ಪ್ರಾಥಮಿಕ ವಿದ್ಯಾಭ್ಯಾಸವನ್ನು ಬಸವನ ಬಾಗೇವಾಡಿಯಲ್ಲಿಯೇ ಪ್ರಾರಂಭಿಸಿದರು. ಪೂಜ್ಯರ ಶಾಲಾ 'ಪ್ರಗತಿ–ಪತ್ರ'ಗಳು ಅವರ ತಂದೆ–ತಾಯಿ ಹಾಗೂ ಪರಿವಾರಕ್ಕೆಲ್ಲ ಸಂತೋಷವನ್ನು ಕೊಡುತ್ತಲಿದ್ದವು. ಅವರಲ್ಲಿನ ಧಾರ್ಮಿಕ ಒಲವು–ಆಸಕ್ತಿಗಳನ್ನು

ಅಭ್ಯಸಿಸಿದ ತಂದೆ–ತಾಯಿಗಳು ಅವರನ್ನು 'ಶಿವಯೋಗ ಮಂದಿರ'ಕ್ಕೆ ಕಳುಹಿಸಲು ತೀರ್ಮಾನಿಸಿದರು. ಶಿವಯೋಗ ಮಂದಿರದಲ್ಲಿ ಧಾರ್ಮಿಕ ಜೀವನದ ತರಬೇತಿ ಪಡೆದಾದ ಮೇಲೆ ಕೆಲಕಾಲ ಪೂಜ್ಯರು ಹುಬ್ಬಳ್ಳಿಯಲ್ಲಿದ್ದುಕೊಂಡು ವಿದ್ಯಾಧ್ಯಯನ ಮಾಡಿದರು. ಶಿವಯೋಗ ಮಂದಿರದಲ್ಲಿರುವಾಗಲೇ ಪೂಜ್ಯರಿಗೆ 'ಉಮಾಪತಿ ಸ್ವಾಮಿಗಳೆ'ಂಬ ಅನ್ವರ್ಥಕ ನಾಮ ಬಂತು. ಅವರು ಯಾವತ್ತೂ ಶಿವನಂತೆ ಏಕಾಂತಪ್ರಿಯರಾಗಿರುತ್ತಿದ್ದುದರಿಂದ ಅವರನ್ನು ಜನಗಳು ಉಮಾಪತಿ ಸ್ವಾಮಿಗಳೆಂದೇ ಗುರುತಿಸತೊಡಗಿದರು.

## ಶ್ರೀಮಂತವಾಯಿತು 'ಪ್ರಗತಿ ಪತ್ರ'ದ ಖಜಾನೆ :

ವಿದ್ಯೆಯ ತವರುಮನೆಯಾದ ಕಾಶಿಯಲ್ಲಿದ್ದು ಉನ್ನತ ವ್ಯಾಸಂಗವನ್ನು ಮಾಡಬೇಕೆಂಬ ಆಸೆ ಶ್ರೀಗಳದಾಗಿತ್ತು. ಸಂಸ್ಕೃತ ಹಾಗೂ ಹಿಂದೀ ಭಾಷೆಗಳನ್ನು ಕರತಲಾಮಲಕ ಮಾಡಿಕೊಳ್ಳಬೇಕು ಎಂಬ ಅವರ ಇಚ್ಛೆಗೆ ಕಾಶಿಯ ವೆಚ್ಚವನ್ನು ಭರಿಸುವ ಸಾಮರ್ಥ್ಯವಿರಲಿಲ್ಲ. ಶ್ರೀಗಳ ಸಂಕಲ್ಪಶಕ್ತಿ ಅಸಾಮಾನ್ಯವಾಗಿತ್ತು. ಅಂತಲೇ ಅವರು ತುಂಬು ದೃಢ ನಿರ್ಧಾರದೊಂದಿಗೆ ಕಾಶಿಯನ್ನು ಪ್ರವೇಶಿಸಿದರು. ಪ್ರಾರಂಭದ ದಿನಗಳಲ್ಲಿ ಅವರು ತುಂಬಾ ಕಷ್ಟಪಟ್ಟು ತಮ್ಮ ಓದನ್ನು ಮುಂದುವರಿಸಿದರು. ಅವರು ಕಾಶೀ ಸಂನ್ಯಾಸಿ ಸಂಸ್ಕೃತ ಪಾಠಶಾಲೆಯಿಂದ 'ಶಾಸ್ತ್ರಿ' ಪರೀಕ್ಷೆಯನ್ನು ತೇರ್ಗಡೆ ಮಾಡಿ ಮುಂದೆ ಕಾಶಿಯ ಶ್ರೀ ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾಲಯದಿಂದ ಸಾಹಿತ್ಯ ವಿಷಯದಲ್ಲಿ 'ಆಚಾರ್ಯ' (ಎಂ.ಎ.) ಪದವಿಯನ್ನು ಪಡೆದುಕೊಂಡರು. ಕಾಶೀ ವಿದ್ಯಾಪೀಠದ ಹಿಂದೀ ಎಂ.ಎ. ಪದವಿಯು ಕೂಡ ಪೂಜ್ಯರ 'ಪ್ರತಿಭಾ–ಬತ್ತಳಿಕೆ'ಯನ್ನು ಸೇರಿತು. ಬನಾರಸ ಹಿಂದೂ ವಿಶ್ವವಿದ್ಯಾಲಯದಲ್ಲಿ ಯೋಗ ಶಿಕ್ಷಣ ತರಬೇತಿಯನ್ನು ಪಡೆದು 'ಅರ್ಹತಾ ಪತ್ರ'ವನ್ನು ತಮ್ಮದನ್ನಾಗಿಸಿಕೊಂಡು ತಮ್ಮ 'ಪ್ರಗತಿ ಪತ್ರ'ದ ಖಜಾನೆಯನ್ನು ಶ್ರೀಮಂತಿಸಿಕೊಂಡರು. ಕಾಶಿಯಲ್ಲಿರುವ ವಿಶ್ವವಿಖ್ಯಾತ ಮೂರೂ ವಿಶ್ವವಿದ್ಯಾಲಯಗಳಿಂದ ಪದವಿ–ಪ್ರಶಸ್ತಿಗಳನ್ನು ಪಡೆದ ಕೀರ್ತಿ ಅವರದಾಗಿದೆ. ಇದೇ ಸಮಯದಲ್ಲಿ ಅಲಹಾಬಾದ–ಪ್ರಯಾಗ ವಿಶ್ವವಿದ್ಯಾಲಯದ 'ಸಾಹಿತ್ಯ ರತ್ನ' ಪದವಿಯನ್ನು ಪಡೆದು ಅದನ್ನು ಕೂಡ ತಮ್ಮ 'ಪ್ರತಿಭಾ ಬುಟ್ಟಿ'ಯಲ್ಲಿ ತುಂಬಿಕೊಂಡರು.

## ಸ್ವಾಧ್ಯಾಯಕ್ಕೆ ಸ್ವಾರ್ಜಿತದ ಸಶಕ್ತ ತಳಹದಿ !! :

ವಿದ್ಯಾರ್ಜನೆ ಹಾಗೂ ಸಾಹಿತ್ಯ ಓದಿನ ಜೊತೆಯಲ್ಲಿ ಪೂಜ್ಯರು ವಿಶ್ವವಿದ್ಯಾಲಯ ನೀಡಿದ ಬಿಡುವಿನ ಸಮಯದಲ್ಲಿ ಕರ್ನಾಟಕಕ್ಕೆ ಬಂದು ಅಲ್ಲಲ್ಲಿ ಪ್ರವಚನ, ಉಪನ್ಯಾಸಗಳನ್ನು ಮಾಡುತ್ತಿದ್ದರು. ಅವರ ವಿದ್ವತ್ಪೂರ್ಣ ಪ್ರವಚನಗಳು ಬಹುಸಂಖ್ಯೆಯಲ್ಲಿ ಜನರನ್ನು ಆಕರ್ಷಿಸುತ್ತಿದ್ದವು. ಹಾಸ್ಯರಸಭರಿತ ಅವರ ಅನುಭವಪೂರ್ಣ ಮಾತು

ಗಳನ್ನು ಜನ ಮತ್ತೆ ಮತ್ತೆ ಕೇಳಿ ಮೆಲುಕುಹಾಕುತ್ತಿತ್ತು. ಪೂಜ್ಯರ ಮಾತುಗಳನ್ನು ಕೇಳಲು ಜನರು ಉತ್ಸಾಹಿತರಾಗುತ್ತಿದ್ದರು. ಈ ಪ್ರವಚನ–ಉಪನ್ಯಾಸಗಳಿಂದ ಪೂಜ್ಯರಿಗೆ ಅವರ ವಿದ್ಯಾಧ್ಯಯನಕ್ಕೆ ಬೇಕಾಗುವ ಆರ್ಥಿಕ ಅನುಕೂಲತೆಯು ದೊರೆಯುತ್ತಲಿತ್ತು. ಈ ಪ್ರವಚನಸೇವೆ ಅವರನ್ನು ಸ್ವಾವಲಂಬಿಗಳನ್ನಾಗಿ ಮತ್ತು ಸ್ವಾಭಿಮಾನಿಗಳನ್ನಾಗಿ ರೂಪಿಸಿತು. ಹೀಗಾಗಿ ಅವರು ತಮ್ಮ ಶೈಕ್ಷಣಿಕ ಓದನ್ನು ಮುಂದುವರಿಸುವುದಕ್ಕಾಗಿ ಬೇರೆಯವರ ಬಳಿ ಆರ್ಥಿಕ ನೆರವಿಗಾಗಿ ಕೈಚಾಚುವ ಪ್ರಶ್ನೆಯೇ ಉದ್ಭವಿಸಲಿಲ್ಲ. ಅವರ ಸ್ವಾಧ್ಯಾಯಕ್ಕೆ ಸ್ವಾರ್ಜಿತದ ಸಶಕ್ತ ತಳಹದಿ ಇತ್ತು!

## ಶ್ರೀಪೀಠದ ಉತ್ತರಾಧಿಕಾರಿಗಳು :

ಪೂಜ್ಯರ ಮೇಲೆ ಶ್ರೀಶೈಲ ಶ್ರೀಪೀಠದ 'ಕೀರ್ತಿಸ್ತಂಭ'ರೆನಿಸಿದ ಪರಮಪೂಜ್ಯ ಲಿಂ. ಜ. ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳ ಗಮನವು ಕೇಂದ್ರೀಕೃತವಾಯಿತು. ತಮಗೊಬ್ಬ ಯೋಗ್ಯ 'ಉತ್ತರಾಧಿಕಾರಿ' ಬೇಕಾಗಿದ್ದಾರೆ ಎಂದು ಲಿಂ. ಕಾಶೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳಲ್ಲಿ ಅವರು ತಮ್ಮ ಅಂತರ್ಯವನ್ನು ತೆರೆದಿಟ್ಟಾಗ ಲಿಂ. ಕಾಶೀ ಜಗದ್ಗುರುಗಳು ಪೂಜ್ಯರ ಹೆಸರನ್ನು ಸಮರ್ಥಿಸಿದರು. ಪೂಜ್ಯರ ವ್ಯಕ್ತಿತ್ವವನ್ನು ಸಮಗ್ರವಾಗಿ ಅಧ್ಯಯನ ಮಾಡಿದ ನಂತರ ಲಿಂ. ಶ್ರೀಶೈಲ ಜಗದ್ಗುರುಗಳು ಪೂಜ್ಯರನ್ನೇ ತಮ್ಮ 'ಉತ್ತರಾಧಿಕಾರಿ'ಯನ್ನಾಗಿಸಿಕೊಳ್ಳಲು ತೀರ್ಮಾನಿಸಿದರು. ಮತ್ತೆ ಮತ್ತೆ ಆಲೋಚನೆ ಮಾಡಿ ಶ್ರೀಶೈಲ ಶ್ರೀ ಮಲ್ಲಿಕಾರ್ಜುನ ಸ್ವಾಮಿಯ ಪ್ರೇರಣೆ ಮತ್ತು ತಮ್ಮ ಅಂತರಂಗದ ಆದೇಶಕ್ಕನುಗುಣವಾಗಿ ಪೂಜ್ಯರನ್ನೇ ತಮ್ಮ 'ಉತ್ತರಾಧಿಕಾರಿ' ಎಂದು ಘೋಷಿಸಿದರು. ದಿನಾಂಕ : ೧೮–೮–೧೯೮೦ರಂದು ಹರಿಹರದಲ್ಲಿ ನಡೆದ ಸರಳ ಸುಂದರ ಪುಟ್ಟ ಕಾರ್ಯಕ್ರಮದಲ್ಲಿ ಶ್ರೀ ಉಮಾಪತಿ ಸ್ವಾಮಿಗಳನ್ನು ಶ್ರೀಶೈಲ ಶ್ರೀಪೀಠದ 'ಉತ್ತರಾಧಿಕಾರಿ'ಗಳೆಂದು ಘೋಷಿಸಲಾಯಿತು. ಶ್ರೀಪೀಠದ ಪರಮ ಭಕ್ತರೆಲ್ಲ ಜಗದ್ಗುರುಗಳ ಅಭಿಪ್ರಾಯವನ್ನು ಅನುಮೋದಿಸಿ ಸಂತಸಿಸಿದರು. ಭಕ್ತ–ಮಾನಸವು ತೃಪ್ತಿಯಿಂದ ತಲೆದೂಗಿತು.

## ಆಯ್ಕೆಯ ಸಮರ್ಥನೆ :

ಪರಮಪೂಜ್ಯ ಲಿಂ. ಜಗದ್ಗುರುಗಳು ತಮ್ಮ ಉತ್ತರಾಧಿಕಾರಿಗಳನ್ನು ತಮ್ಮ ಜೊತೆಯಲ್ಲಿಯೇ ಇರಿಸಿಕೊಂಡು ಅವರಿಗೆ ತಮ್ಮ ಶ್ರೀಪೀಠದ ವಿಶಾಲವಾದ ಕಾರ್ಯಕ್ಷೇತ್ರವನ್ನು ಪರಿಚಯಿಸತೊಡಗಿದರು. ತಮ್ಮಲ್ಲಿನ ಕರ್ತೃತ್ವ ಶಕ್ತಿಯನ್ನು ಪರಿಚಯಿಸಲು ಮತ್ತು ದುಡಿಸಲು ತಮಗೊಂದು ಯೋಗ್ಯಭೂಮಿ ಮತ್ತು ಭೂಮಿಕೆ ದೊರೆತಿದೆ ಎಂದರಿತ ಶ್ರೀಗಳು ಶ್ರೀಪೀಠದ ಕಾರ್ಯವಾಹಿನಿಯಲ್ಲಿ ಸಂಪೂರ್ಣವಾಗಿ ತಮ್ಮನ್ನು ತಾವು ತೊಡಗಿಸಿಕೊಂಡರು. ತಮ್ಮ ಹೊಣೆ–ಹೊಣೆಗಾರಿಕೆಗಳನ್ನು ಅರಿತ

ಅವರು ತಮ್ಮ ಕಾರ್ಯಕ್ಷಮತೆ ಹಾಗೂ ಕಾರ್ಯತತ್ಪರತೆಗಳಿಂದ ಜಗದ್ಗುರುಗಳ ಆಯ್ಕೆಯನ್ನು ಸಮರ್ಥಿಸಿದರು. ಶ್ರೀಪೀಠದ ಭಕ್ತರೆಲ್ಲರೂ ತಮ್ಮ ಮುಂದಿನ ಜಗದ್ಗುರುಗಳನ್ನು ಹೆಮ್ಮೆಯ ಕಣ್ಣುಗಳಿಂದ ನೋಡತೊಡಗಿದರು.

## 'ಸೂರ್ಯ'ಸಿಂಹಾಸನಾರೋಹಣ :

ಉತ್ತರಾಧಿಕಾರಿಯನ್ನು ಮಾಡಿಕೊಂಡಾದ ಮೇಲೆ ತಮ್ಮ ಉತ್ತರಾಧಿಕಾರಿಗಳಿಗೆ ಶ್ರೀಪೀಠದ ಸಮಸ್ತ ಅಧಿಕಾರವನ್ನು ವಹಿಸಿಕೊಡುವಲ್ಲಿ ಲಿಂ. ಜಗದ್ಗುರುಗಳು ವಿಳಂಬದ ಮನರಂಜಿಸಲಿಲ್ಲ. ಅವರು 'ಶುಭಸ್ಯ ಶೀಘ್ರಮ್'ಎಂಬಂತೆ ದಿನಾಂಕ **೧೩-೨-೮೨**ರ ಶುಭಮುಹೂರ್ತದಂದು ತಮ್ಮ ಉತ್ತರಾಧಿಕಾರಿಗಳಿಗೆ **'ಜಗದ್ಗುರು ಪಟ್ಟಾಭಿಷೇಕ'**ವನ್ನು ಮಾಡಿದರು. ಅಂದು ಅತ್ಯಂತ ಅದ್ದೂರಿ ಹಾಗೂ ವೈಭವಗಳಿಂದ ನಡೆದ 'ಜಗದ್ಗುರು ಪಟ್ಟಾಭಿಷೇಕ' ಕಾರ್ಯಕ್ರಮಕ್ಕೆ ವೀರಶೈವರ ಉಳಿದ ನಾಲ್ಕೂ ಪೀಠಗಳ ಪೀಠಾಚಾರ್ಯರು ದಯಮಾಡಿಸಿ ತಮ್ಮ ದಿವ್ಯ ಸಾನ್ನಿಧ್ಯವನ್ನಿತ್ತು ನೂತನ ಜಗದ್ಗುರುಗಳನ್ನು ಅಭಿನಂದಿಸಿದರು ಮತ್ತು ಹಿರಿಯ ಜಗದ್ಗುರುಗಳನ್ನು ತುಂಬು ಹೃದಯದಿಂದ ಪ್ರಶಂಸಿಸಿದರು. ಆಂಧ್ರ, ಕರ್ನಾಟಕ, ಮಹಾರಾಷ್ಟ್ರ, ತಮಿಳುನಾಡು, ಕೇರಳ ...... ಇತ್ಯಾದಿ ಎಲ್ಲ ಪ್ರದೇಶಗಳಿಂದಲೂ ಆಗಮಿಸಿದ ಶಿವಾಚಾರ್ಯರು ಮತ್ತು ಶ್ರೀಪೀಠದ ಭಕ್ತರು ನೂತನ ಸನ್ನಿಧಿಗಳನ್ನು **ಪರಮಪೂಜ್ಯ ಶ್ರೀ ೧೦೦೮ ಜಗದ್ಗುರು ಉಮಾಪತಿ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳೆಂದು** ಉಗ್ಘಡಿಸಿ, 'ಜೈ ಪರಾಕ್' ಹೇಳಿ ತುಂಬು ಉತ್ಸಾಹದಿಂದ ಅಭಿನಂದಿಸಿ ಗೌರವಿಸಿದರು. ಇದೇ ಸಂದರ್ಭ ದಲ್ಲಿ ಜಗದ್ಗುರು ಶ್ರೀ ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳ **ಸುವರ್ಣಮಹೋತ್ಸವವು** ಕೂಡ ಅತ್ಯಂತ ವೈಭವದಿಂದ ಜರುಗಿದುದನ್ನು ನೆನಪಿಸಿಕೊಳ್ಳದೆ ಇರಲಾಗದು. ಜನಕ್ಕೆ ಒಂದೇ ಸಂದರ್ಭದಲ್ಲಿ ಎರಡು ವಿಧವಾದ ತೃಪ್ತಿ-ಭೋಜನ !! ಮಹಾಜನತೆ ಎರಡೂ ಕಾರ್ಯಕ್ರಮಗಳನ್ನು ಹೃದಯ ತುಂಬಿ ಅನುಭವಿಸಿತು.

## ವ್ಯಾಜ್ಯ ವಿಜಯ :

ಜಗದ್ಗುರು ಪೀಠಾರೋಹಣವನ್ನು ಮಾಡುತ್ತಲೇ ಪರಮಪೂಜ್ಯರ ಹೆಗಲ ಮೇಲಣ ಹೊಣೆಗಾರಿಕೆಯು ದಿನೇ ದಿನೇ ಗುರುತರವಾಗತೊಡಗಿತು. ಲಿಂ. ಜಗದ್ಗುರುಗಳು ನೂತನ ಸನ್ನಿಧಿಗೆ ತಮ್ಮ ಎಲ್ಲ ಜವಾಬ್ದಾರಿಗಳನ್ನು ವಹಿಸಿಕೊಟ್ಟು ಆಗಾಗ ಅವರಿಗೆ ಮಾರ್ಗದರ್ಶನ ಮಾಡುತ್ತ 'ವಿಶ್ರಾಂತ ಜೀವನ'ವನ್ನು ಸಾಗಿಸತೊಡಗಿದರು. ಪರಮಪೂಜ್ಯರು ಮೊದಲು ಮೊದಲು ಶ್ರೀಪೀಠದ ಹತ್ತು ಹಲವು ಆಂತರಿಕ ಸಮಸ್ಯೆಗಳನ್ನು ಚೆನ್ನಾಗಿ ಅಭ್ಯಸಿಸಿ ನಿಧಾನವಾಗಿ ಅವುಗಳಿಗೆ ಪರಿಹಾರಗಳನ್ನು ಕಂಡುಹಿಡಿಯತೊಡಗಿದರು. **ಪರಮಪೂಜ್ಯರು ಮಾತನಾಡಿ ಮಾಡದ ಪರಂಪರೆಗೆ ಸೇರಿದವರಲ್ಲ. ಅವರು ಮಾಡಿ**

ಮಾತನಾಡುವ ಸತ್ಪರಂಪರೆಗೆ ಸೇರಿದವರು. ಸುಮಾರು ಅರ್ಧಶತಮಾನಕ್ಕಿಂತಲೂ ಹೆಚ್ಚು ದಿನಗಳಿಂದ ಶ್ರೀಪೀಠದ ಹಾಗೂ ಪೀಠಾಚಾರ್ಯರ ತಲೆತಿನ್ನುತ್ತಲಿದ್ದ ಶ್ರೀಶೈಲ ಶ್ರೀಪೀಠದ ಮೇಲಿರುವ ವಿವಾದಾಸ್ಪದ ಮೊಕದ್ದಮೆಯನ್ನು ಅವರು ಕೈಗೆತ್ತಿಕೊಂಡರು. ಮೊಕದ್ದಮೆಯು ಇದುವರೆಗೆ ನಡೆದುಕೊಂಡು ಬಂದ ದಾರಿಯ ಸರ್ವೇಕ್ಷಣೆ ಮತ್ತು ಪುನರ್ಪರಿಶೀಲನೆಯನ್ನು ಮಾಡಿ ಅದರಲ್ಲಿ ಮತ್ತೆ ಹೊಸ ಉತ್ಸಾಹವನ್ನು ತುಂಬಿದರು. ವೀರಭಿಕ್ಷಾವೃತ್ತಿಮಠದ ವಂಶಸ್ಥರ–ಶ್ರೀಪೀಠವು ಪುತ್ರವರ್ಗ ಸಂಪ್ರದಾಯಕ್ಕೆ ಸೇರಿದುದು–ಎಂಬ ವಿತಂಡವಾದವನ್ನು ಪರಮಪೂಜ್ಯರು ನ್ಯಾಯಾಲಯಕ್ಕೆ ಪ್ರಬಲವಾದ ಐತಿಹಾಸಿಕ ಪುರಾವೆಗಳನ್ನು ಒದಗಿಸಿಕೊಡುವ ಮೂಲಕ ನಿರಸ್ತಗೊಳಿಸಿದರು. ದಿನಾಂಕ : ೨೩–೧೧–೧೯೬೮ರಂದು ನ್ಯಾಯಾಲಯವು ತನ್ನ ಅಂತಿಮ –ತೀರ್ಪನ್ನು ನೀಡಿ ವಾದಪಕ್ಷವನ್ನು ನಿರಸ್ತಗೊಳಿಸಿ ಪೀಠಾಧೀಶ್ವರರ ನ್ಯಾಯಸಮ್ಮತ ಧ್ವನಿಯನ್ನು ಎತ್ತಿ ಹಿಡಿಯಿತು. ಈ ಮೊಕದ್ದಮೆಯ ವಿಜಯದಿಂದಾಗಿ ಸನ್ನಿಧಿಯವರು ಶ್ರೀಪೀಠದ ಇತಿಹಾಸದಲ್ಲಿ ಹೊಸ ಅಧ್ಯಾಯವನ್ನೇ ಬರೆದಂತಾಯಿತು.

## ಮಾತನಾಡಿದ ಕರ್ತೃತ್ವ ಶಕ್ತಿ :

ಪರಮಪೂಜ್ಯ ಜಗದ್ಗುರುಗಳು ವಿದ್ಯಾವತ್ಸಲರಾಗಿರುವುದರಿಂದ ಅವರ ಕರ್ತೃತ್ವ ಶಕ್ತಿಯ ಪೂರ್ಣಪ್ರಯೋಜನವನ್ನು ಪಡೆದು ಆಂಧ್ರ, ಕರ್ನಾಟಕ, ಮಹಾರಾಷ್ಟ್ರಗಳ ತುಂಬೆಲ್ಲ ಅಲ್ಲಲ್ಲಿ ಸ್ಕೂಲು, ಕಾಲೇಜು, ತಾಂತ್ರಿಕ ತರಬೇತಿ ಕೇಂದ್ರಗಳು, ವಿದ್ಯಾರ್ಥಿ ವಸತಿ–ಗೃಹಗಳು ತೆರೆದುಕೊಂಡಿವೆ. ಅವುಗಳಲ್ಲಿನ ಕೆಲವನ್ನು ಈ ಕೆಳಗಿನಂತೆ ಹೆಸರಿಸಬಹುದು– (೧) ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಗುಂತಕಲ್‌ದಲ್ಲಿ ಜಗದ್ಗುರು ಶ್ರೀ ಪಂಡಿತಾರಾಧ್ಯ ಪದವಿಪೂರ್ವ ಕಾಲೇಜು.
(೨) ಕರ್ನಾಟಕ ರಾಜ್ಯದ ಶಿವಮೊಗ್ಗ ಜಿಲ್ಲೆಯ ಶಿರಾಳಕೊಪ್ಪದಲ್ಲಿ ಜಗದ್ಗುರು ಪಂಚಾಚಾರ್ಯ ತಾಂತ್ರಿಕ ಮಹಾವಿದ್ಯಾಲಯ. ಇದೇ ಜಿಲ್ಲೆಯ ಸಂತೆಬೆನ್ನೂರಿನಲ್ಲಿ ಶ್ರೀಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯ ಪದವಿಪೂರ್ವ ಕಾಲೇಜು. ದಾವಣಗೆರೆ ಮತ್ತು ಹರಿಹರಗಳಲ್ಲಿ ಆಂಗ್ಲಭಾಷಾ ಮಾಧ್ಯಮ ಸ್ಕೂಲು ; ಕಲೆ, ವಾಣಿಜ್ಯ ಮತ್ತು ವಿಜ್ಞಾನ ಕಾಲೇಜು, ಶಿಕ್ಷಣ ತರಬೇತಿ ಕಾಲೇಜು (B.Ed. College), ಪ್ರೌಢಶಾಲೆ, ಈಶ್ವರೀ ಪ್ರಾಥಮಿಕ ಶಾಲೆ...... ಇತ್ಯಾದಿ.

## ವಿಧಾಯಕ ಸ್ಪಂದನ :

ಶಿಕ್ಷಣ ಪ್ರೇಮದ ಜೊತೆ ಜೊತೆಯಲ್ಲಿ ಸಮಾಜ–ಪ್ರೇಮವನ್ನು ಕೂಡ ಧಾರಾಳವಾಗಿ ಹೊಂದಿದ ಪರಮಪೂಜ್ಯರು ಅನೇಕ ಗ್ರಾಮ–ನಗರಗಳಲ್ಲಿ ಪಂಚಾಚಾರ್ಯ ಮಂಗಲ–ಭವನಗಳನ್ನು ಹಾಗೂ ಮಂದಿರ–ಮಂಟಪಗಳನ್ನು ಸ್ಥಾಪಿಸುವುದಕ್ಕೆ

ಸ್ಫೂರ್ತಿ ಮತ್ತು ಪ್ರೇರಣೆ–ಪ್ರೋತ್ಸಾಹಗಳನ್ನಿತ್ತು ಆಶೀರ್ವದಿಸಿದ್ದಾರೆ. ಅವುಗಳಲ್ಲಿ ಕೆಲವನ್ನು ಈ ಮುಂದೆ ಕೊಡಲಾಗಿದೆ–ಆಂಧ್ರಪ್ರದೇಶದ ಕರ್ನೂಲ್ ಜಿಲ್ಲೆಯ ಆದವಾನಿ ನಗರದಲ್ಲಿ ವೀರಶೈವ ಮಂಗಲಭವನ, ಆತ್ಮಕೂರಿನಲ್ಲಿ ಶ್ರೀಶೈಲ ಜಗದ್ಗುರು ಯಾತ್ರಾನಿವಾಸ, ಕರ್ನಾಟಕದ ಚಿತ್ರದುರ್ಗ ಜಿಲ್ಲೆಯ ಜಿಗಳೂರಲ್ಲಿ ಪಂಚಾಚಾರ್ಯ ಮಂದಿರ, ಹಾಸನದಲ್ಲಿ ಪಂಚಾಚಾರ್ಯ ಮಂದಿರ ಮತ್ತು ಭವನ, ತುಮಕೂರಿನಲ್ಲಿ ಮಂಗಲ ಭವನ, ಬಳ್ಳಾರಿ ಜಿಲ್ಲೆಯ ಶ್ರೀಧರಗಡ್ಡೆಯಲ್ಲಿ ಪಂಚಾಚಾರ್ಯ ಮಂಗಲ ಭವನ, ಹುಬ್ಬಳ್ಳಿಯಲ್ಲಿ ಪಂಚಾಚಾರ್ಯ ಪುಣ್ಯಾಶ್ರಮ, ಧಾರವಾಡ ಜಿಲ್ಲೆಯ ಗುತ್ತಲದಲ್ಲಿ ಜಗದ್ಗುರು ಪಂಚಾಚಾರ್ಯ ಮಂಗಲ ಕಾರ್ಯಾಲಯ, ಬಿಜಾಪೂರ ಜಿಲ್ಲೆಯ ಬಸವನ ಬಾಗೇವಾಡಿಯಲ್ಲಿ ಗುರುಮಠ . . . . ಇತ್ಯಾದಿ. ಇದೂ ಅಲ್ಲದೆ, ಶ್ರೀಶೈಲ ಶ್ರೀಪೀಠದ ನೇರವಾದ ಆಡಳಿತಕ್ಕೆ ಒಳಪಟ್ಟ ಆಂಧ್ರದ 'ಆತ್ಮಕೂರು ಶ್ರೀಶೈಲ ಸೂರ್ಯಮಠ' ಮತ್ತು 'ಗುಂತಕಲ್ ಸೂರ್ಯಮಠ'ಗಳು ಇವರಿಂದಾಗಿ ಸಾಕಷ್ಟು ಸುಧಾರಣೆಯನ್ನು ಹೊಂದಿ 'ಪ್ರಗತಿ–ಪಥ'ವನ್ನು ತುಳಿದಿವೆ. ದೇಶದ ತುಂಬೆಲ್ಲ ಅನೇಕ ಶಾಖಾಮಠಗಳನ್ನು ಹೊಂದಿದ ಶ್ರೀಶೈಲ ಪೀಠದ ಭಕ್ತರ ಸಂಖ್ಯೆ ಗಣನೆಗೆ ಸಿಕ್ಕುವುದಿಲ್ಲ. ಅದು ಅನಂತ ಹಾಗೂ ಗಣನಾಬಾಹಿರವಾಗಿದೆ.

## ಕರ್ನಾಟಕದ ಶ್ರೀಶೈಲ :

ಪರಮಪೂಜ್ಯ ಜಗದ್ಗುರುಗಳು ತಮ್ಮ ಗುರುಗಳಾದ ಲಿಂ. ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳವರ ಕರ್ತೃಗದ್ದುಗೆ ಇರುವ ದಾವಣಗೆರೆಯನ್ನು ಮತ್ತು ಅದರ ಪಕ್ಕದಲ್ಲಿಯೇ ಇರುವ ಹರಿಹರವನ್ನು ಕರ್ನಾಟಕದ ಶ್ರೀಶೈಲವನ್ನಾಗಿಸಿದ್ದಾರೆ. ಇವೆರಡೂ ನಗರಗಳು ಜಗದ್ಗುರುಗಳ ಕರ್ತೃತ್ವ ಶಕ್ತಿಯ ಸಂಪೂರ್ಣ ಪ್ರಯೋಜನವನ್ನು ಪಡೆದುಕೊಂಡಿವೆ. ಈ ಎರಡೂ ನಗರಗಳಲ್ಲಿ ಜಗದ್ಗುರುಗಳ ಆಶೀರ್ವಾದಪೋಷಿತ ಸಂಸ್ಕೃತ ಪಾಠಶಾಲೆ, ಭೋಜನ–ಗೃಹಗಳು, ವಿದ್ಯಾರ್ಥಿ ವಸತಿ–ಗೃಹಗಳು ಮತ್ತು ಅತಿಥಿ–ಗೃಹಗಳು ನಿರ್ಮಾಣಗೊಂಡು ಜನಸೇವೆಯನ್ನು ಮಾಡುತ್ತಲಿವೆ. ಇವೆರಡೂ ನಗರಗಳು ಶ್ರೀಶೈಲ ಶ್ರೀಪೀಠದ ಪ್ರಧಾನ ಕಛೇರಿಗಳಿದ್ದಂತಿವೆ.

## ಅಂದುಕೊಂಡದ್ದಲ್ಲ, ಆಗುಮಾಡಿದ್ದು :

ಶ್ರೀಶೈಲ ಕ್ಷೇತ್ರೋದ್ಧಾರದಲ್ಲಿಯೂ ಪರಮಪೂಜ್ಯರು ಹಿಂದಡಿ ಇಟ್ಟವರಲ್ಲ. ಆಂಧ್ರಪ್ರದೇಶದ ಹೃದಯದಂತಿರುವ ಶ್ರೀಶೈಲ ಸುಕ್ಷೇತ್ರದಲ್ಲಿ ಪರಮಪೂಜ್ಯ ಜಗದ್ಗುರುಗಳು ತಮ್ಮ ಕುಶಲ ಮತ್ತು ಕುಶಾಗ್ರ ವ್ಯಕ್ತಿತ್ವವನ್ನು ಸಂಪೂರ್ಣವಾಗಿ ದುಡಿಸಿದ್ದಾರೆ.

ಶ್ರೀಕ್ಷೇತ್ರದ ಸರ್ವತೋಮುಖ ಪ್ರಗತಿಯನ್ನು ಅವರು ಈಗಾಗಲೇ ಮಾಡಿದ್ದು ಅವರ ಅನೇಕ ಹೊಸ ಹೊಸ ಯೋಜನೆಗಳು ಅಲ್ಲಿ ಆಕಾರ ತಳೆದಿವೆ. ಜಗದ್ಗುರು ಮಹಾಸನ್ನಿಧಾನವು ಶ್ರೀಪೀಠದಲ್ಲಿ ಹಾಗೂ ಶ್ರೀಶೈಲ ಸುಕ್ಷೇತ್ರದಲ್ಲಿ ಆಗುಮಾಡಿದ ಕೆಲ ವಿಧಾಯಕ ಕಾರ್ಯಗಳನ್ನು ಈ ರೀತಿ ಸಂಗ್ರಹಿಸಿ ಹೇಳಬಹುದು–(೧) **ಶ್ರೀ ಪಂಡಿತಾರಾಧ್ಯ ಯಾತ್ರಾನಿವಾಸ :** ಯಾತ್ರಾರ್ಥಿಗಳ ವಸತಿಸೌಕರ್ಯಕ್ಕಾಗಿ ಕಟ್ಟಲ್ಪಟ್ಟ ಇದನ್ನು ಆಧುನಿಕಗೊಳಿಸಿ ಸುಸಜ್ಜಿತ ಕೊಠಡಿಗಳನ್ನು ನಿರ್ಮಿಸಲಾಗಿದೆ. (೨) **ಶ್ರೀ ಶಿವಶಂಕರ ಯಾತ್ರಾನಿವಾಸ :** ದಾವಣಗೆರೆಯ ಬಾಪೂಜಿ ವಿದ್ಯಾಸಂಸ್ಥೆಯ ಕಾರ್ಯಾಧ್ಯಕ್ಷರು ಹಾಗೂ ಗಣ್ಯರೂ ಆದ ಶ್ರೀ ಶ್ಯಾಮನೂರು ಶಿವಶಂಕರಪ್ಪನವರ ಆರ್ಥಿಕ ಸಹಾಯದಿಂದ ಕಟ್ಟಲ್ಪಟ್ಟ ಈ ನಿವಾಸದಲ್ಲಿ ಕ್ಷೇತ್ರದರ್ಶನ ಹಾಗೂ ಪೀಠ–ದರ್ಶನಕ್ಕೆ ಬಂದ ಯಾತ್ರಾರ್ಥಿಗಳಿಗೆ ವಸತಿಸೌಕರ್ಯವನ್ನು ಕಲ್ಪಿಸಿಕೊಡಲಾಗುತ್ತದೆ. (೩) **ಯಾತ್ರಾ ನಿವಾಸ ಹಾಗೂ ನಿತ್ಯಾನ್ನದಾನ ಮಂದಿರ :** ಇಲ್ಲಿ ತಂಡೋಪತಂಡವಾಗಿ ಹರಿದು ಬರುವ ಯಾತ್ರಿಕರಿಗೆ ಅನ್ನ ಹಾಗೂ ವಸತಿ ಸೌಕರ್ಯಗಳನ್ನು ಒದಗಿಸಲಾಗುತ್ತದೆ. ಯಾವುದೇ ಜಾತಿಭೇದ, ಕುಲಭೇದವಿಲ್ಲದೆ ಯಾತ್ರಿಕರಿಗೆ ಪ್ರಸಾದದ ವ್ಯವಸ್ಥೆಯನ್ನು ಮಾಡಲಾಗಿದೆ. (೪) **ಸುವರ್ಣ ಕಲಶ ಸ್ಥಾಪನೆ ಮತ್ತು ಧ್ವಜಸ್ತಂಭದ ಪ್ರತಿಷ್ಠಾಪನೆ :** ಕ್ಷೇತ್ರಾಧಿಪತಿಯಾದ ಶ್ರೀ ಮಲ್ಲಿಕಾರ್ಜುನ ಸ್ವಾಮಿಯ ಹಾಗೂ ಭ್ರಮರಾಂಬಾ ದೇವಸ್ಥಾನದ ಬಾಹ್ಯ ಸೌಂದರ್ಯವನ್ನು ಹೆಚ್ಚಿಸುವುದಕ್ಕಾಗಿ ದಿನಾಂಕ ೬–೭–೧೯೮೮ರಂದು ಸುಕ್ಷೇತ್ರದಲ್ಲಿ ಬಹುದೊಡ್ಡ ಕಾರ್ಯಕ್ರಮವನ್ನು ಹಮ್ಮಿಕೊಂಡು ದೇವಸ್ಥಾನದ ಮುಖಮಂಟಪದ ಗೋಪುರದ ಮೇಲೆ ಪಂಚ ಸುವರ್ಣ ಕಲಶಗಳ ಸ್ಥಾಪನೆ ಮಾಡಲಾಗಿದೆ. ಪ್ರಾಂಗಣದಲ್ಲಿ ಧ್ವಜಸ್ತಂಭದ ಸ್ಥಾಪನೆಯಾಗಿದೆ. (೫) **ಶಿಖರೇಶ್ವರ ಬೆಟ್ಟದ ಮೇಲೆ ವಿದ್ಯುತ್ ಲಿಂಗ :** ಜಗದ್ಗುರುಗಳವರು ಧನಸಹಾಯವನ್ನಿತ್ತು ಶಿಖರೇಶ್ವರ ಬೆಟ್ಟದ ಮೇಲೊಂದು 'ಬೆಳಕಿನ ಲಿಂಗ'ವನ್ನು ನಿರ್ಮಿಸಿದ್ದಾರೆ. (೬) **ಶ್ರೀಶೈಲದ ತೆಲಗು ವಿಶ್ವವಿದ್ಯಾಲಯದಲ್ಲಿ ವೀರಶೈವ ವಿಚಾರ ಸಂಕೀರ್ಣ ವ್ಯವಸ್ಥೆಯನ್ನು** ಮಾಡುವ ಮೂಲಕ ಅಲ್ಲಿ ಶೈವ ಹಾಗೂ ವೀರಶೈವ ಸಿದ್ಧಾಂತಗಳ ಕುರಿತು ಆಗಾಗ ವಿಚಾರ ಗೋಷ್ಠಿಗಳು ನಡೆದುಕೊಂಡು ಬರುವ ಹಾಗೆ ಮಾಡಲಾಗಿದೆ.

## ಮುಂದೆ... ಮುಂದೆ.... ಮುಂದೆ..... (ಯೋಜನಾ 'ನೀಲನಕ್ಷೆ') :

ಪರಮಪೂಜ್ಯ ಜಗದ್ಗುರುಗಳು ತಾವು ಸಂಕಲ್ಪಿಸಿದ ಯೋಜನೆಗಳು ಸಿದ್ಧಿಸುತ್ತಲೇ ಮತ್ತೆ ಮತ್ತೆ ಹೊಸ ಹೊಸ ಯೋಜನೆಗಳಿಗೆ ಜನ್ಮಕೊಡುತ್ತಾರೆ. ಅವರ 'ಯೋಜನಾ–ನೀಲನಕ್ಷೆ'ಯಲ್ಲಿ ಅವರು ಮತ್ತೆ ಹೊಸ ಹೊಸ ಯೋಜನೆಗಳನ್ನು ನೋಂದಾಯಿಸಿದ್ದಾರೆ. ಅವುಗಳಲ್ಲಿ ಕೆಲವು ಈ ಕೆಳಗಿನಂತಿವೆ –

(೧) **ಗೋಶಾಲೆ ಮತ್ತು ಗೋ–ಪಾಲನ :** ಗೋಶಾಲೆಯೊಂದನ್ನು ಸ್ಥಾಪಿಸಿ ಅಲ್ಲಿ

ಗೋವುಗಳಿಗೆ ಆಶ್ರಯಕೊಟ್ಟು ಪಾಲಿಸುವುದರೊಂದಿಗೆ ಅವುಗಳ ಗೋಮಯದಿಂದ ಶುದ್ಧವಾದ ಕ್ರಿಯಾಭಸ್ಮಗಳನ್ನು ಸಿದ್ಧಗೊಳಿಸಿ ಅತ್ಯಂತ ಕಡಿಮೆ ಬೆಲೆಯಲ್ಲಿ ಅವು ಭಕ್ತ ಸಮುದಾಯಕ್ಕೆ ತಲುಪುವಂತೆ ಮಾಡುವುದು.

(೨) **ಪಂಚಸೂತ್ರಲಿಂಗ ನಿರ್ಮಾಣ ಕಾರ್ಯಾಗಾರ:** ಶ್ರೀಪೀಠದಲ್ಲಿ ಅನುಭವಿ ಕರಕುಶಲ ಕೆಲಸಗಾರರಿಂದ ಪಂಚಸೂತ್ರಲಿಂಗಗಳನ್ನು ವಿಧ್ಯುಕ್ತವಾಗಿ ತಯಾರಿಸಿ ಜನತೆಗೆ ತಲುಪಿಸುವುದು.

(೩) **ಧಾರ್ಮಿಕ ವಸ್ತುಗಳ ಸಂಚಾರಿ ಮಾರಾಟ ಮಳಿಗೆಗಳನ್ನು** ಆಯಾಭಾಗಗಳಲ್ಲಿ ಸ್ಥಾಪಿಸಿ ಅವುಗಳಿಂದ ಜನಕ್ಕೆ ಧಾರ್ಮಿಕ ಸಾಮಗ್ರಿಗಳು ಸುಲಭ ಬೆಲೆಯಲ್ಲಿ ಉಪಲಬ್ಧವಾಗುವಂತೆ ಮಾಡುವುದು.

(೪) **ಗುರುಕುಲ ಹಾಗೂ ಗ್ರಂಥಾಲಯಗಳನ್ನು** ಸ್ಥಾಪಿಸಿ ಜನರನ್ನು ನಾಗರಿಕ ಗೊಳಿಸುವುದು.

(೫) **ಧಾರ್ಮಿಕ ಹಾಗೂ ಸಾಂಸ್ಕೃತಿಕ ತರಬೇತಿ ಕೇಂದ್ರಗಳನ್ನು** ಪ್ರೋತ್ಸಾಹಿಸುವುದು.

(೬) ಶ್ರೀಶೈಲ ಸುಕ್ಷೇತ್ರದಲ್ಲಿರುವ ಜರ್ಜರಿತ ಮಠ–ಮಂದಿರಗಳನ್ನು ಪುನರ್ನವೀಕರಿಸಿ ಅವುಗಳನ್ನು ದರ್ಶನೀಯವಾಗಿಸುವುದು..... ಇತ್ಯಾದಿ.

(೭) **ಜಗದ್ಗುರು ಶ್ರೀ ಪಂಡಿತಾರಾಧ್ಯ ಅಧ್ಯಯನ ಪೀಠ :** ಶ್ರೀಶೈಲದ ತೆಲಗು ವಿಶ್ವವಿದ್ಯಾಲಯದಲ್ಲಿ ಜಗದ್ಗುರು ಶ್ರೀ ಪಂಡಿತಾರಾಧ್ಯ ಅಧ್ಯಯನ ಪೀಠವೊಂದನ್ನು ಸ್ಥಾಪಿಸಿ ಅಲ್ಲಿ ವೀರಶೈವ ಸಿದ್ಧಾಂತ ಮತ್ತು ಮೌಲ್ಯಗಳ ಅಧ್ಯಯನಕ್ಕೆ ಅವಕಾಶ ಕಲ್ಪಿಸಿಕೊಡುವ ಸಂಕಲ್ಪ ಶ್ರೀಸನ್ನಿಧಿಯವರದಾಗಿದೆ.

(೮) **ಶ್ರೀಶೈಲ ಜ್ಯೋತಿ** ಎಂಬ ತ್ರೈಮಾಸಿಕ ಧಾರ್ಮಿಕ ಪತ್ರಿಕೆಯನ್ನು ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿ ಪ್ರಕಟಿಸಿ ಆ ಮೂಲಕ ಅದನ್ನು ವೀರಶೈವ ಮುಖವಾಣಿ ಯನ್ನಾಗಿಸುವುದು ಮತ್ತು ಅದರ ಮುಖಾಂತರ ವೀರಶೈವ ಪ್ರತಿಭೆಗಳನ್ನು ಪರಿಚಯಿಸುವುದು.

(೯) **ಕದಳೀವನ ಪ್ರೇಕ್ಷಣೀಯ ಸ್ಥಳವಾಗಬೇಕು :** ಪರಮಪೂಜ್ಯರ ಇನ್ನೊಂದು ಮಹತ್ತ್ವದ ಕನಸೆಂದರೆ–ಕದಳೀವನವನ್ನು ಪ್ರೇಕ್ಷಣೀಯ ಸ್ಥಳವನ್ನಾಗಿಸುವುದು. ಅಕ್ಕಮಹಾದೇವಿ ಮತ್ತು ಅಲ್ಲಮರು ಐಕ್ಯವಾಗಿದ್ದಾರೆಂದು ಹೇಳಲ್ಪಡುವ ಇದು ದುರ್ಗಮವಾಗಿದ್ದು ಜನಗಳು ಹೋಗುವಂತಿಲ್ಲ. ಅದನ್ನೊಂದು ಪ್ರೇಕ್ಷಣೀಯ ಸ್ಥಳವಾಗಿಸಿದರೆ ಜನತೆಯ ಕದಳೀವನವನ್ನು ಕಾಣಬೇಕೆಂಬ ಕನಸು ನನಸಾಗುತ್ತದೆ ಎಂಬುದು ಜಗದ್ಗುರುಗಳ ಸಂಕಲ್ಪ. ಕದಳೀವನವನ್ನು ಪ್ರೇಕ್ಷಣೀಯ ಸ್ಥಳವನ್ನಾಗಿಸಬೇಕೆಂಬ ಸನ್ನಿಧಿಯವರ ಸಂಕಲ್ಪ ಈಗಾಗಲೇ ಆಂಧ್ರ ಸರಕಾರದ ಜೊತೆಯಲ್ಲಿ ವಿಧಾಯಕ ಹಂತದಲ್ಲಿ ಮಾತನಾಡಿದೆ.

## ಅಂಗದ ಹೆಜ್ಜೆ :

ಸನ್ನಿಧಿಯವರ ಸಂಕಲ್ಪಕ್ಕೆ 'ಸಿದ್ಧಿ'ಯಾಗಿ ನಿಲ್ಲುವ ಸ್ಥೈರ್ಯ ಇದೆ. ಅಂತಲೇ ಪೀಠಾಚಾರ್ಯರಾದ ಈ ಹನ್ನೆರಡು ವರುಷಗಳ ಅವಧಿಯಲ್ಲಿ ಅವರು ತಮ್ಮ ಯಾವುದೇ ಸಂಕಲ್ಪವೂ ಹುಸಿಯಾಗುವುದಕ್ಕೆ ಅವಕಾಶ ಕೊಟ್ಟಿಲ್ಲ. ಸಾಮಾಜಿಕ ಕೆಲಸ–ಕಾರ್ಯಗಳನ್ನು ಮಾಡುವಾಗ ಮತ್ತು ಮಾಡಿಸುವಾಗ ಅವರು ದಿಟ್ಟ ಹೆಜ್ಜೆಗಳನ್ನಿಡುತ್ತಾರೆ. ಅವರಿಟ್ಟ ಹೆಜ್ಜೆ ಅದು ಅಂಗದ ಹೆಜ್ಜೆಯೇ ಆಗಿರುತ್ತದೆ. ಅದನ್ನು ಕಿತ್ತುವುದು ಮತ್ತು ಕಿತ್ತಿ ಎತ್ತಿಡುವುದು ಎಂಥ ಅತಿರಥ–ಮಹಾರಥರಿಂದಲೂ ಸಾಧ್ಯವಿಲ್ಲ. ಅಚಲದಷ್ಟು ಅಚಲ ಪರಮಪೂಜ್ಯರ ನಿರ್ಧಾರ. ಅಂತಲೇ ಅವರು ಸಂಕಲ್ಪಿಸಿದ ಕಾರ್ಯಗಳು ಆಕಾರತಳೆಯುತ್ತವೆ, ಯೋಜಿಸಿದ ಯೋಜನೆಗಳು ಕೈಗೂಡುತ್ತವೆ. ಪರಮಪೂಜ್ಯರ ಪರಿಣಾಮಕಾರಿ ವಕ್ತೃತ್ವ ಶಕ್ತಿಯು ಅನೇಕ 'ಕಪಿಮುಷ್ಟಿ'ಯಂತಿರುವ ಕೈಗಳನ್ನು 'ಕರ್ಣ'ನನ್ನಾಗಿಸಿದೆ. ಸನ್ನಿಧಿಯವರ ಉಪದೇಶಾಮೃತವನ್ನು ಕೇಳಿ ಅದುವರೆಗೆ ತುಟಿ ಬಿಗಿದು ಮೌನವಾಗಿದ್ದ ಶ್ರೀಮಂತರ 'ಶ್ರೀಮಂತ ಜೇಬುಗಳು ಮಾತನಾಡಿವೆ. ಶ್ರೀಮಂತ ಜನರ 'ಶ್ರೀಮಂತ ಜೇಬು'ಗಳಿಂದ ಹರಿದುಬಂದ ಸಂಪತ್ಸರಿತೆಯು ಅಲ್ಲಲ್ಲಿ ಅನೇಕ ವಿಧಾಯಕ ಕಾರ್ಯ–ಕಾರ್ಯಕ್ರಮಗಳಾಗಿ ನಿಂತುಕೊಂಡಿದೆ.

## ಧರ್ಮಜಾಗೃತಿ ಯಾತ್ರೆ :

ಜಗದ್ಗುರು ಪೀಠಾರೋಹಣವನ್ನು ಮಾಡಿ ಈಗಾಗಲೇ ಹನ್ನೆರಡು ವರುಷಗಳು ಗತಿಸಿದ್ದು ಈ ಅವಧಿಯಲ್ಲಿ ಪರಮಪೂಜ್ಯರು ಆಂಧ್ರಪ್ರದೇಶ, ಕರ್ನಾಟಕ ಮತ್ತು ಮಹಾರಾಷ್ಟ್ರಗಳ ಸಾವಿರಾರು ಗ್ರಾಮಗಳಿಗೆ ದಯಮಾಡಿಸಿ ತಮ್ಮ ಪಾದರಜದಿಂದ ಆ ಗ್ರಾಮ–ನಗರಗಳನ್ನು ಪಾವನಗೊಳಿಸಿದ್ದಾರೆ. ಈ ಮೂರೂ ರಾಜ್ಯಗಳ ಪ್ರಮುಖ ನಗರಗಳಲ್ಲಿ ಅವರ ಉತ್ಸವ ಹಾಗೂ ಕಾರ್ಯಕ್ರಮಗಳು ನಡೆದುಕೊಂಡು ಬಂದಿವೆ. ಅವುಗಳಲ್ಲಿ ಕೆಲವನ್ನು ಈ ಕೆಳಗೆ ಹೆಸರಿಸಲಾಗಿದೆ–

**ಆಂಧ್ರಪ್ರದೇಶ :** ಹೈದರಾಬಾದ, ಸಿಕಂದರಾಬಾದ, ಗದ್ವಾಲ್, ಗುಳ್ಯಂ..... ಇತ್ಯಾದಿ.

**ಕರ್ನಾಟಕ :** ಬೆಂಗಳೂರು, ತುಮಕೂರು, ಹಾಸನ, ಬಳ್ಳಾರಿ, ಹುಬ್ಬಳ್ಳಿ, ಧಾರವಾಡ, ಗುಳೇದಗುಡ್ಡ, ಬಾಗಲಕೋಟ...... ಇತ್ಯಾದಿ

**ಮಹಾರಾಷ್ಟ್ರ :** ಸೊಲ್ಲಾಪುರ, ನಾಗಪೂರ, ಪೂಣಾ, ಲಾತೂರ, ನಾಂದೇಡ... ಇತ್ಯಾದಿ. ತಾವು ಸಂಚರಿಸಿದ ಸ್ಥಳಗಳಲ್ಲೆಲ್ಲ ಜಗದ್ಗುರುಗಳು ಒಂದೊಂದು ವಿಧಾಯಕ ಕಾರ್ಯವಾಗಿ ನಿಂತುಕೊಂಡಿದ್ದಾರೆ. ತಾವು ಸಂಚರಿಸಿದೆಡೆಗಳಲ್ಲೆಲ್ಲ ಜನರನ್ನು ದೀಕ್ಷಿತರನ್ನಾಗಿಸುತ್ತ ಅವರಲ್ಲಿ ಧರ್ಮಪ್ರೇಮವನ್ನು, ಸತ್ಸಂಗ–ರತಿಯನ್ನು ತುಂಬಿದ್ದಾರೆ. ವ್ಯಸನಾಧೀನರಾಗಿ ಪ್ರಾಪಂಚಿಕ ನೆಮ್ಮದಿಯನ್ನೇ ಕಳೆದುಕೊಂಡ ಜನಗಳನ್ನು

'ವ್ಯಸನಮುಕ್ತ'ರನ್ನಾಗಿಸಲು ಒಂದು 'ಮಹಾಸಂಗ್ರಾಮ'ವನ್ನೇ ಸಾರಿದ್ದಾರೆ. ಈ ದಿಶೆಯಲ್ಲಿ ಅವರ ಉತ್ಸಾಹವು ಎಂದೂ ವಾಮನವಾಗಿ ನಿಂತುಕೊಂಡಿಲ್ಲ. ಅದು ದಿನೇ ದಿನೇ 'ವಿಂಧ್ಯಪರ್ವತ'ದಂತೆ ಬೆಳೆಯುತ್ತಲೇ ಇದೆ.

## ಸತ್ಕೃತಿ ಜಾಗೃತಿ :

ತಾವು ದಯಮಾಡಿಸಿದೆಡೆಗಳಲ್ಲೆಲ್ಲ ಸನ್ನಿಧಿಯವರು ಅನುಷ್ಠಾನ, ಧರ್ಮ–ಜಾಗೃತಿ ಸಭೆ, ಸರ್ವ ಧರ್ಮ–ಸಮ್ಮೇಳನ ಮತ್ತು ದಸರಾ ದರ್ಬಾರ್‌ಗಳನ್ನು ಏರ್ಪಡಿಸುತ್ತ ಜನರನ್ನು ಧರ್ಮಪ್ರೇಮಿಗಳನ್ನಾಗಿ ಮತ್ತು ಭಕ್ತಿವಂತರನ್ನಾಗಿ ಮಾಡುತ್ತಲಿದ್ದಾರೆ. ಅವರು ದಸರಾ ದರ್ಬಾರ್‌ಗಳನ್ನು ನಡೆಸಿದ ಕೆಲವು ಗ್ರಾಮ–ನಗರಗಳ ಹೆಸರುಗಳನ್ನು ಈ ಮುಂದೆ ಕೊಡಲಾಗಿದೆ.–ಧಾರವಾಡ ಜಿಲ್ಲೆಯ ರಾಣೆಬೆನ್ನೂರು ತಾಲ್ಲೂಕಿನ ಹಲಗೇರಿ, ಹಾವೇರಿ ತಾಲ್ಲೂಕಿನ ಗುತ್ತಲ, ಕಾಲವಾಡ, ಬಳ್ಳಾರಿ ಜಿಲ್ಲೆಯ ಮತ್ತಿಹಳ್ಳಿ, ಹುಬ್ಬಳ್ಳಿ, ಸಂತೆಬೆನ್ನೂರು, ಶಿರಾಳಕೊಪ್ಪ, ಹಾಲ್ಸಿ, ಮಂದ್ರೂಪ, ಅಬಲೂರು..... ಇತ್ಯಾದಿ. ಈ ಸಂದರ್ಭದಲ್ಲಿ ಸನ್ನಿಧಿಯವರು 'ಸಾರಸ್ವತ ಲೋಕದ ಪ್ರತಿಭೆ'ಗಳನ್ನು ಮತ್ತು 'ಸೇವಾ ಸಾಮ್ರಾಜ್ಯ'ದ ಸೇವಾದುರಂಧರರನ್ನು ಸತ್ಕರಿಸಿ 'ಪ್ರಶಸ್ತಿ ಪತ್ರ'ಗಳನ್ನಿತ್ತು ಆಶೀರ್ವದಿಸುತ್ತಾರೆ ಮತ್ತು ಅವರ ನೈತಿಕ ಬಲವನ್ನು ಬೆಂಬಲಿಸಿ ಪ್ರೋತ್ಸಾಹಿಸುತ್ತಾರೆ.

## ಸಾರಸ್ವತ ಲೋಕದ ಹೆಮ್ಮೆ :

ಪರಮಪೂಜ್ಯ ಸನ್ನಿಧಿಯವರು ಸ್ವತಃ ಸಾಹಿತಿಗಳಾಗಿದ್ದು ತಾವಿನ್ನೂ ವಿದ್ಯಾರ್ಥಿ ದೆಸೆಯಲ್ಲಿರುವಾಗಲೇ ಅನೇಕ ಚಿಕ್ಕ ಪುಟ್ಟ ಗ್ರಂಥಗಳನ್ನು ಬರೆದು ಪ್ರಕಟಪಡಿಸಿದ್ದಾರೆ. ಅವುಗಳಲ್ಲಿ ಕೆಲವು ಈ ಕೆಳಗಿನಂತಿವೆ– **ಸುವಿಚಾರಗುಚ್ಛ, ಯೋಗಕನ್ನಡಿ, ವಚನಲಹರಿ ಅಷ್ಟಾವರಣ ಮಹಿಮೆ......** ಇತ್ಯಾದಿ. ಇವಲ್ಲದೆ ಅವರು ಬರೆದ ಅನೇಕ ಸಾಮಾಜಿಕ ಸ್ವಾಸ್ಥ್ಯವರ್ಧಕ ಲೇಖನಗಳು ಮತ್ತು ವೈಚಾರಿಕ ಲೇಖನಗಳು ನಾಡಿನ ಪ್ರಮುಖ ಮುಖಪತ್ರಿಕೆಗಳ ಮೂಲಕ ನಾಡಿಗರ ಮನೆ–ಮನಗಳನ್ನು ಸೇರಿವೆ. ಸನ್ನಿಧಿಯವರಲ್ಲೊಬ್ಬ ಸಂವೇದನಾಶೀಲ ಸಾಹಿತಿಯು ವಾಸಮಾಡಿಕೊಂಡಿದ್ದಾನೆ. ಆದರೆ ಇಂದು ಮತ್ತು ಇತ್ತೀಚೆಗೆ ವಿಪರೀತವಾಗಿ ಬೆಳೆದ ಕಾರ್ಯಕ್ಷೇತ್ರ ಮತ್ತು ಕಾರ್ಯಕ್ರಮಗಳು ಅವರಲ್ಲಿನ ಸಾಹಿತಿಗೆ ಮತ್ತು ಸಾಹಿತ್ಯ–ಕೃಷಿಗೆ ಕಡಿವಾಣವನ್ನು ಹಾಕಿವೆ. ಆದರೆ ಸೊಗಸಾದ ಸಾಹಿತ್ಯ ಅವರ ಕೈ ಸೇರಿದಾಗ ಅವರದನ್ನು ಓದಿ ಅನುಭವಿಸಿ ಹೃದಯ ತುಂಬಿ ಕೊಂಡಾಡುತ್ತಾರೆ. ಪರಮಪೂಜ್ಯರು ವಿದ್ಯಾವಂತರನ್ನು ಹಾಗೂ ವಿದ್ಯಾಪ್ರೇಮಿಗಳನ್ನು ವಿಶೇಷವಾದ ವಾತ್ಸಲ್ಯದ ಕಣ್ಣುಗಳಿಂದ ನೋಡುತ್ತಾರೆ. ಸರಸ್ವತಿಯ ಉಪಾಸನೆಯಲ್ಲಿ ತಲ್ಲೀನರಾದವರನ್ನು ಮನದುಂಬಿ ಹಾರೈಸುತ್ತಾರೆ.

## ಆರಂಕುಶವಿಟ್ಟೊಡಂ ನೆನೆವುದೆನ್ನ ಮನಮ್ ..... :

ಪರಮಪೂಜ್ಯ ಸನ್ನಿಧಿಯವರು ಭಕ್ತವತ್ಸಲರು. ತಮ್ಮ ಭಕ್ತರನ್ನು ಅವರು ಅತಿಯಾಗಿ ಪ್ರೀತಿಸುತ್ತಾರೆ. ಭಕ್ತರಲ್ಲದವರಲ್ಲಿಯೂ ಕೂಡ ಭಕ್ತಿಯನ್ನು ತುಂಬಿ ಭಕ್ತರನ್ನಾಗಿಸುವ ಶಕ್ತಿಯು ಅವರಲ್ಲಿದೆ. 'ಭಕ್ತಿ ಸುದಾಮ'ರಲ್ಲಿ ಭಕ್ತಿಸುಧೆಯನ್ನು ತುಂಬಿ ಅವರನ್ನು 'ಭಕ್ತಿ ಸು–ಧಾಮ'ರನ್ನಾಗಿಸುತ್ತಾರೆ. ಸಮಾಜದ ಮಧ್ಯದಲ್ಲಿರುವ ಕೊರಡಿನಂತಿರುವ ಜನಗಳನ್ನು ಅವರು ತಮ್ಮ ಉಪದೇಶಾಮೃತವೆಂಬ ಸಂಜೀವಿನಿಯ ಸ್ಪರ್ಶ ಮಾಡಿಸಿ ಕೊನರಿಸಿದ್ದಾರೆ. ಜನರ ಬರಡು–ಬರಡಾದ ಬದುಕನ್ನು ಹಯನಿಸಿದ್ದಾರೆ. ಧರ್ಮವಿಮುಖರನ್ನು ಧರ್ಮಾಭಿಮುಖರನ್ನಾಗಿಸಿದ್ದಾರೆ. ಪರಮಪೂಜ್ಯ ಸನ್ನಿಧಿಯವರು ತಮ್ಮ ಆಕರ್ಷಕ ಹಾಗೂ ಚೇತೋಹಾರಿ ವ್ಯಕ್ತಿತ್ವದಿಂದಾಗಿ ಮತ್ತು ಗುಣಾಢ್ಯತನದಿಂದಾಗಿ ಭಕ್ತಜನಗಳು ಯಾವತ್ತೂ ಅವರನ್ನು ನೆನೆದುಕೊಳ್ಳುವಂತೆ ಮಾಡಿದ್ದಾರೆ. ಪಂಪ ಮಹಾಕವಿಯು 'ಆರಂಕುಶವಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಮ್,' ಎಂದು ಹೇಳಿದ ಹಾಗೆ ಪರಮಪೂಜ್ಯ ಜಗದ್ಗುರುಗಳವರ ಅನುಗ್ರಹ–ಆಶೀರ್ವಾದಗಳ 'ಶ್ರೀರಕ್ಷೆ'ಯಲ್ಲಿ ಪುಳಕಿತವಾದ ಮತ್ತು ಅವರ ಪ್ರೀತಿ–ವಾತ್ಸಲ್ಯಗಳನ್ನು ಉಂಡು ಬೆಳೆದ ಅವರ ಕೋಟಿ ಕೋಟಿ ಭಕ್ತ–ಮಾನಸವು 'ಆರಂಕುಶವಿಟ್ಟೊಡಂ ನೆನೆವುದೆನ್ನ ಮನಂ ಶ್ರೀಶೈಲ ಜಗದ್ಗುರು ಶ್ರೀ ಉಮಾಪತಿ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸನ್ನಿಧಿಮ್' ಎಂದು ಅನುದಿನವೂ ಅನುಕ್ಷಣವೂ ಹೇಳುತ್ತಲಿದೆ ಎಂದು ಹೇಳಿದರೆ ನಾವು ಬಹಳಷ್ಟು ಉಚಿತವಾದುದನ್ನು ಮತ್ತು ಸಮಂಜಸವಾದುದನ್ನೇ ಹೇಳಿದ್ದೇವೆ ಎಂದು ಭಾವಿಸಿಕೊಳ್ಳುತ್ತೇವೆ.

|| ೬೦ ||

## ಶ್ರೀಮತ್ ಕಾಶೀ ಜ್ಞಾನ ಸಿಂಹಾಸನಾಧೀಶ್ವರ ವಿದ್ಯಾವಾಚಸ್ಪತಿ ಪರಮ ಪೂಜ್ಯ ಶ್ರೀಶ್ರೀಶ್ರೀ ೧೦೦೮ ಜಗದ್ಗುರು ಡಾ. ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳು

### ಕಾಶಿಯೇ ಕೈಲಾಸ :

'ಮತ್ತಮಾಮರಲ್ಲ.......... ವಿಶ್ವನಿಯಾಮಕನಾದ ಪರಮಪ್ರಭು ಶಿವನೇ ಮನಸೋತು ಮಾರುಹೋಗಿ ಕಾಶೀ ಮಹಾನಗರದಲ್ಲಿ ನೆಲೆನಿಂತುಕೊಂಡಿದ್ದಾನೆ' ಎಂಬ ನಮ್ಮೀ ಮಾತು ಸುಳ್ಳಲ್ಲವೆಂಬುದು ನೂರಕ್ಕೆ ನೂರರಷ್ಟು ಸತ್ಯ. ಕಾಶಿಯ ಇತಿಹಾಸವೇ ಹೇಳುವಂತೆ ರಾಜಾ ದಿವೋದಾಸನಿಂದ ಸಂಸ್ಥಾಪಿಸಲ್ಪಟ್ಟ ಈ ನಯನ ಮನೋಹರವಾದ ಆನಂದ ಕಾನನ (ಉದ್ಯಾನ ನಗರ)ದಲ್ಲಿರಲು ಶಿವನು ಆಸೆಪಟ್ಟು ವಾಸಮಾಡಿ ಕೊಂಡಿರಲು ಬಂದನಂತೆ. ಸಾಕ್ಷಾತ್ ಶಿವನೇ ಬಂದು ವಾಸಮಾಡಿಕೊಂಡಿರಲು ಪ್ರಾರಂಭಿಸಿದ ಮೇಲೆ ಮೂವತ್ತೂ್ಮರು ಕೋಟಿ ದೇವತೆಗಳು ಸಹ ಇಲ್ಲಿ ಬಂದು ನೆಲೆ ನಿಂತುಕೊಂಡರಂತೆ. ಕಾಶಿಯು ಭೂ-ಕೈಲಾಸ. ಕಾಶಿಯ ಮುಂದೆ ಶಿವನಿಗೆ ತನ್ನ ಕೈಲಾಸವು ಕೂಡ ತೃಣಕ್ಕೆ ಸಮಾನವಾಗಿ ಕಂಡಿತು.

### ಉತ್ತರದಿಂದ ಉತ್ತರಕ್ಕೆ :

ಪರಮ ಪವಿತ್ರವಾದ ಗಂಗಾನದಿಯ ತೀರದಲ್ಲಿರುವ ಕಾಶಿಯು ಪುಣ್ಯಕ್ಷೇತ್ರವೂ ಅಹುದು, ಪುಣ್ಯತೀರ್ಥವೂ ಅಹುದು. ಭಗೀರಥನ 'ಭಗೀರಥ ಪ್ರಯತ್ನ'ದಿಂದ ಶಿವನ ಜಡೆಯಿಂದ ಭೂಮಿಯ ಮೇಲಿಳಿದು ಬಂದ ಭಾಗೀರಥಿಯು ಈ ಕ್ಷೇತ್ರದಲ್ಲಿ ಉತ್ತರಾಭಿಮುಖವಾಗಿ ಹರಿಯುತ್ತಾಳೆ. ಉತ್ತರ ದಿಕ್ಕಿನಲ್ಲಿ ಹುಟ್ಟಿದ ನದಿಗಳು ದಕ್ಷಿಣಾಭಿಮುಖವಾಗಿ ಹರಿಯುವದೊಂದು ನಿಸರ್ಗ-ಕ್ರಮ. ಆದರೆ ಇಲ್ಲಿ ಮಾತ್ರ ಹಿಮಾಲಯದ 'ಗಂಗೋತ್ರಿ'ಯಲ್ಲಿ ಹುಟ್ಟಿದ ಗಂಗೆ ಮತ್ತೆ ಉತ್ತರ ದಿಕ್ಕಿನತ್ತಲೇ ಮುಖಮಾಡಿ ಪ್ರವಹಿಸುತ್ತಿದ್ದಾಳೆ. ಆದ್ದರಿಂದ ಕಾಶೀ ಕ್ಷೇತ್ರಕ್ಕೆ ಇನ್ನಷ್ಟು , ಮತ್ತಷ್ಟು ಮಹತ್ತ್ವ ಬಂದಿದೆ.

### ಮುಕ್ತಿ ಮತ್ತು ಜೀವನ್ಮುಕ್ತಿ :

'ಕಾಶ್ಯಾಂ ಮರಣಾನ್ಮುಕ್ತಿ:','ಮರಣಂ ಮಂಗಲಂ ಯತ್ರ...' ಎಂಬ ಗೌರವಗಳಿಗೆ ಪಾತ್ರವಾದ ಕಾಶಿಯು ಒಂದು ಮುಕ್ತಿಮಂದಿರ. ಕಾಶಿಯಲ್ಲಿ ಕಾಯವಿಟ್ಟರೆ ಮತ್ತು

ಬಿಟ್ಟರೆ ಕೈವಲ್ಯ ಕಟ್ಟಿಟ್ಟ ಬುತ್ತಿ. ಅಮಂಗಲವಾದ ಮರಣವು ಕೂಡ ಕಾಶಿಯಲ್ಲಿ ಮಂಗಲಮಯವೆನಿಸುತ್ತದೆ. ಕಾಶಿಯಲ್ಲಿ ಸತ್ತರೆ ಮುಕ್ತಿ ; ಬದುಕಿಕೊಂಡಿದ್ದರೆ ಜೀವನ್ಮುಕ್ತಿ. ಆದ್ದರಿಂದಲೇ ಸಾಯುವವರು ಸಾಯಲು ಕಾಶಿಗೆ ಬರುತ್ತಾರೆ ; ಬದುಕುವವರು ಬದುಕಿಕೊಂಡಿರಲು ಕಾಶಿಗೆ ಬರುತ್ತಾರೆ. ಕಾಶಿಯು ಮೃತ್ಯುಂಜಯನಾದ ಬಾಬಾ ಶಂಕರನ ನಗರವಾಗಿರುವುದರಿಂದ ಅಲ್ಲಿ ಮೃತ್ಯುಭಯವು ಇಲ್ಲವೇ ಇಲ್ಲ. ಅಲ್ಲಿ ಸಂಭವಿಸಿದ ಮೃತ್ಯು, ಮೃತ್ಯುವಲ್ಲ; ಅದು ಮೋಕ್ಷ. ಆದ್ದರಿಂದ ಕಾಶಿಯಲ್ಲಿ ಜನ ಚಿಂತಿತರಾಗಿ ಸಾಯುವದಿಲ್ಲ; ನಿಶ್ಚಿಂತರಾಗಿ ಸಾಯುತ್ತಾರೆ.

## ಭಾರತದ ಹೃದಯ :

ಹಿಮಾಲಯವು ಭಾರತದ ತಲೆಯಾದರೆ ಕಾಶಿಯು ಭಾರತದ ಹೃದಯ. ಭರತವರ್ಷದ ಬಹುದೊಡ್ಡ ರಾಜ್ಯವಾದ ಉತ್ತರ ಪ್ರದೇಶದ 'ಕೀರ್ತಿಕಿರೀಟ'ದಂತಿರುವ ಕಾಶಿಯು ಹತ್ತು ಹಲವು ಹೆಸರುಗಳಿಂದ ಕರೆಯಲ್ಪಟ್ಟಿದೆ. ಪ್ರಾಚೀನ ಕಾಲದಲ್ಲಿ ಆನಂದಕಾನನ, ರುದ್ರವಾಸ, ಅವಿಮುಕ್ತ ಕ್ಷೇತ್ರ, ತಪಸ್ಥಲಿ, ಶಿವಪುರಿ, ರಾಜನಗರಿ, ಕಾಶಿಕಾ ....... ಇತ್ಯಾದಿ ಹೆಸರುಗಳಿಂದ ವಿಖ್ಯಾತವಾದ ಈ ನಗರವು ಈಗ ವಾರಾಣಸಿ, ಕಾಶಿ ಮತ್ತು ಬನಾರಸ ಎಂಬ ಹೆಸರುಗಳಿಂದ ಕರೆಯಲ್ಪಡುತ್ತಲಿದೆ.

## ಒಂದು ಅನುಭವ :

ಭಾರತೀಯ ವೇದಾಗಮೋಪನಿಷತ್ ಪುರಾಣೇತಿಹಾಸಗಳಲ್ಲಿ ಧಾರಾಳವಾಗಿ ಹೆಸರುಮಾಡಿದ ಕಾಶಿಯು ಹಿಂದೂ ಜನಗಳ ಭಾವ-ಭಾವನೆಗಳ ತವರುಮನೆ. ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಒಂದಾದ ಶ್ರೀ ವಿಶ್ವನಾಥಲಿಂಗವು ಇಲ್ಲಿರುವುದರಿಂದ ಹಿಂದೂ ಜನ ಜನಾಂಗಕ್ಕೆ ಕಾಶಿಯೆಂದರೆ ಕೈಲಾಸವಿದ್ದಂತೆ. ಭಾರತೀಯರಿಗೆ ಕಾಶಿಯು ಬರೀ ಕಾಶಿಯಲ್ಲ; ಅವರಿಗೆ ಅದೊಂದು ಅನುಭವ. ಪ್ರತಿದಿನ ಲಕ್ಷ ಲಕ್ಷ ಸಂಖ್ಯೆಯಲ್ಲಿ ಬರುವ ಯಾತ್ರಾರ್ಥಿಗಳು ಕಾಶಿಯನ್ನು ನೋಡಲು ಅಲ್ಲ, ಕಾಶಿಯನ್ನು ಅನುಭವಿಸಲು ಬರುತ್ತಾರೆ. 'ಕಾಶಿ' ಎಂದ ತಕ್ಷಣ ನಮ್ಮ ಜನಗಳ ಭಾವ-ಭಾವನೆಗಳಲ್ಲಿ ಭಕ್ತಿಯು ಮನೆ ಮಾಡಿ ನಿಲ್ಲುತ್ತದೆ. ಅವರಿಗರಿಯದಂತೆಯೇ ಭಕ್ತಿಯಿಂದ ಅವರ ತಲೆಗಳು ತಲೆಬಾಗುತ್ತವೆ. ಕೈಗಳು ತಮ್ಮಷ್ಟಕ್ಕೆ ತಾವೇ ಮುಗಿದುಕೊಳ್ಳುತ್ತವೆ.

## 'ಜ್ಞಾನಮಂದಿರ'ದ ಗರ್ಭಗೃಹ :

ಕಾಶಿಯು ಭಾರತೀಯರ ಧಾರ್ಮಿಕ ರಾಜಧಾನಿಯಾಗಿರುವಂತೆ ಅದು ಭಾರತದ ಸಾಂಸ್ಕೃತಿಕ ಮತ್ತು ಶೈಕ್ಷಣಿಕ ರಾಜಧಾನಿಯೂ ಆಗಿದೆ. ಇದು ಸಾಹಿತ್ಯ, ಸಂಗೀತ, ಕಲೆ ಮತ್ತು ಸಂಸ್ಕೃತ ಹಾಗೂ ಸಂಸ್ಕೃತಿಗಳ ತವರುಮನೆ. ಪ್ರಾಚೀನ ಕಾಲದಿಂದಲೂ

ಈ ಮಹಾನಗರವು ತನ್ನಲ್ಲಿನ ವಿದ್ವತ್ತು ಮತ್ತು ಸಾಂಸ್ಕೃತಿಕ ಸಂಪತ್ತುಗಳಿಂದಾಗಿ ವಿಶ್ವದ ನಾನಾ ಮೂಲೆಗಳಿಂದ ಜನರನ್ನು ಸೂಜಿಗಲ್ಲಿನಂತೆ ತನ್ನತ್ತ ಆಕರ್ಷಿಸುತ್ತ ಬಂದಿದೆ. ಅಸಾಧಾರಣ ಪ್ರತಿಭೆಯ ಮೇಧಾವಿಗಳು, ಶಿಖರಪ್ರಾಯರಾದ ಗಜ–ದಿಗ್ಗಜ ಪಂಡಿತರು ಇಲ್ಲಿದ್ದರು ಮತ್ತು ಈಗಲೂ ಇದ್ದಾರೆ. ಸಂಸ್ಕೃತ ಭಾಷೆಯೊಂದಿಗೆ ಇಲ್ಲಿನ ಸಂಸ್ಕೃತಿಯು ಅವಿನಾಭಾವ ಸಂಬಂಧದಿಂದ ಬೆಳೆದುಕೊಂಡಿರುವುದರಿಂದ 'ಸಂಸ್ಕೃತ' ಎಂದ ತಕ್ಷಣ ಕಣ್ಣುಗಳ ಮುಂದೆ ಕಾಶಿಯೇ ಬಂದು ನಿಂತುಕೊಳ್ಳುತ್ತದೆ. ದೇಶ–ವಿದೇಶಗಳಿಂದ ಅಧ್ಯಯನ ಮತ್ತು ಸಾಧನೆಗಳಿಗಾಗಿ ಬಂದ ಅನೇಕ ಜನ ಕಾಶೀ ವಿಶ್ವನಾಥ, ಮಾತಾ ಅನ್ನಪೂರ್ಣೇಶ್ವರಿ ಹಾಗೂ 'ಗಂಗಾಮಯ್ಯಾ'ಳ ಸಾನ್ನಿಧ್ಯದಲ್ಲಿದ್ದುಕೊಂಡು ವಿದ್ಯಾಧ್ಯಯನ–ಸಾಧನಾದಿಗಳನ್ನು ಮಾಡಿ ಜಗದ್ವಿಖ್ಯಾತರಾಗಿದ್ದಾರೆ. ಸಿದ್ಧ–ಪ್ರಸಿದ್ಧರಾಗಿದ್ದಾರೆ. 'ವಿದ್ಯಾನಗರಿ' ಎಂದೇ ಖ್ಯಾತವಾದ ಕಾಶಿಯಲ್ಲಿ ಮೂರು ವಿಶ್ವವಿದ್ಯಾಲಯಗಳಿರುವುದರಿಂದ ಅದನ್ನು 'ವಿಶ್ವವಿದ್ಯಾಲಯಗಳ ನಗರ' (A City of Univerisities)ವೆಂದೂ ಹೇಳುತ್ತಾರೆ. ಕಾಶೀ ಹಿಂದೂ ವಿಶ್ವ ವಿದ್ಯಾಲಯ, ಕಾಶೀ ವಿದ್ಯಾಪೀಠ ಮತ್ತು ಶ್ರೀ ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾಲಯಗಳ 'ಕೀರ್ತಿ ಸುಗಂಧ'ವು ದೇಶ–ವಿದೇಶಗಳ ತುಂಬೆಲ್ಲ ತುಂಬಿಕೊಂಡಿದೆ. ಕಾಶಿಯಲ್ಲಿರುವ ಸಂಸ್ಕೃತ ಪಾಠಶಾಲೆ, ಸ್ಕೂಲು–ಕಾಲೇಜುಗಳ ಲೆಕ್ಕವನ್ನಿಡುವುದು ಆಗದ ಮಾತು. ಒಂದೇ ಒಂದು ಮಾತಿನಲ್ಲಿ ಹೇಳುವುದಾದರೆ ಇಡೀ ಪ್ರಪಂಚವೇ ಸರಸ್ವತಿಯ ಜ್ಞಾನಮಂದಿರವಾದರೆ ಕಾಶಿಯು ಆ ಮಂದಿರದ 'ಗರ್ಭಗೃಹ'ವೆಂದು ಹೇಳಬಹುದು.

### ಭಾರತ ದರ್ಶನ :

ಕಾಶಿಯನ್ನು ನೋಡಿದರಾಯಿತು; ಇಡೀ ಭಾರತವನ್ನು ನೋಡಿದ ಹಾಗೆಯೇ. ಕಾಶಿಯನ್ನು ನೋಡಿಯಾದ ಮೇಲೆ ಭಾರತದ ಇತರ ಭಾಗಗಳಿಗೆ ಭೆಟ್ಟಿಕೊಡುವ ಅವಶ್ಯಕತೆಯೇ ಇಲ್ಲ. ಭಾರತದ ಎಲ್ಲ ಪ್ರಾಂತಗಳ ಜನ ತಮ್ಮ ತಮ್ಮ ಪ್ರಾಂತೀಯ ಸಂಸ್ಕೃತಿ ಮತ್ತು ಭಾಷೆಗಳನ್ನು ಬದುಕಿಸಿಕೊಂಡು ಮತ್ತು ಬೆಳಗಿಸಿಕೊಂಡು ಇಲ್ಲಿ ವಾಸಮಾಡಿಕೊಂಡಿದ್ದಾರೆ. ಕಾಶ್ಮೀರದಿಂದ ಕನ್ಯಾಕುಮಾರಿಯವರೆಗಿನ ಎಲ್ಲ ಜನಗಳು ಮತ್ತು ಎಲ್ಲ ಭಾಷಾಭಾಷಿಗಳು ಇಲ್ಲಿದ್ದಾರೆ. ಕಾಶಿಯು ಸಮಗ್ರ ಹಾಗೂ ಸಂಪೂರ್ಣ ಭಾರತದ ದರ್ಶನವನ್ನು ಮಾಡಿಸುತ್ತದೆ. ಆದ್ದರಿಂದ ಇದನ್ನು ಭಾರತದ 'ಪ್ರಾತಿನಿಧಿಕ ನಗರ'ವೆಂದು ಹೇಳಿದರೆ ತಪ್ಪಲ್ಲ.

### ಅಭಾವದ ಅಭಾವ :

ಅತ್ಯಂತ ಸಂವೇದನಾಶೀಲವಾದ ಈ ನಗರವು ಹತ್ತು ಹಲವು ದೃಷ್ಟಿಗಳಿಂದ ಹೆಸರುಮಾಡಿದೆ. ಇಲ್ಲಿನ ಬನಾರಸ್ ಸೀರೆಗಳು ಜಗತ್ಪ್ರಸಿದ್ಧವಾಗಿವೆ. ಕರಕುಶಲ

ಕೆಲಸಗಾರಿಕೆಗೆ ಹೆಸರು ಮಾಡಿದ ಕಾಶಿಯ ಜನಗಳು ಸೊಗಸುಗಾರರು ಮತ್ತು ರಸಿಕರು. ಯಾವತ್ತೂ ಪಾನ್–ಬೀಡಾವನ್ನು ಮೆಲ್ಲುತ್ತಿರುವ ಇವರು ತಾವು ಕಾಶಿಯವರಾಗಿರುವುದಕ್ಕೆ ತುಂಬಾ ಹೆಮ್ಮೆಪಟ್ಟುಕೊಳ್ಳುತ್ತಾರೆ. ಕಾಶಿಯಲ್ಲಿ ಎಲ್ಲವೂ ಇದೆ ಮತ್ತು ಕಾಶಿಯಲ್ಲಿ ಎಲ್ಲರೂ ಇದ್ದಾರೆ. ಸಂತ–ಮಹಾತ್ಮರು, ಸಾಧುಮಹಾರಾಜರೂ ಇಲ್ಲಿದ್ದಾರೆ. ಅವರ ಜೊತೆಯಲ್ಲಿ ಗೂಂಡಾ–ಫಂಡಾರಾಜರುಗಳೂ ಇಲ್ಲಿದ್ದಾರೆ. ಹಾಗೆ ನೋಡಿದರೆ ಕಾಶಿಯಲ್ಲಿ ಇಲ್ಲವೆಂಬುವುದೊಂದೇ ಇಲ್ಲ. ಕಾಶಿಯಲ್ಲಿ ಅಭಾವದ ತೀವ್ರ ಅಭಾವವಿದೆ ಎಂದು ಹೇಳಲು ತುಂಬಾ ಸಂತೋಷವೆನಿಸುತ್ತದೆ.

## 'ಧನ್ಯೋಽಸ್ಮಿ' :

ಅಸಂಖ್ಯಾತ ಜಗತ್ಪ್ರಸಿದ್ಧ ಜನಗಳು ಮತ್ತು ಪುಣ್ಯಪುರುಷರು ಕಾಶಿಯನ್ನು ದರ್ಶಿಸಿ–ಸಂದರ್ಶಿಸಿ ಹೋಗಿದ್ದಾರೆ. ಆ ಕಾಲದಿಂದಲೂ ಶಂಕರಾಚಾರ್ಯ, ರಾಮಾನುಜ, ರಾಮತೀರ್ಥ..... ಇವರೇ ಮೊದಲಾದವರು ಕಾಶಿಗೆ ಬಂದು 'ಧನ್ಯೋಽಸ್ಮಿ' ಎಂಬ ಭಾವನೆಯನ್ನು ತಾವು ಹೊಂದುವುದರೊಂದಿಗೆ ಕಾಶಿಯ ಮಣ್ಣಿನ ಪುಣ್ಯವನ್ನು ಹೆಚ್ಚಿಸಿದ್ದಾರೆ.ಈ ದೇಶದ ಮಹಾನ್ ವಿಭೂತಿಗಳೆಲ್ಲ ಕಾಶಿಯ ದರ್ಶನ ಮಾಡಿದ್ದಾರೆ. ಜನ–ನಿಬಿಡವಾದ ಮತ್ತು ನಿತ್ಯ ಜಾತ್ರೆಯ ಉಪಾಧಿಯಲ್ಲಿ ಜನತೆಯಿಂದ ತುಂಬಿಕೊಂಡಿರುವ ಕಾಶಿಯಲ್ಲಿ ಈಗಲೂ ವಿಭೂತಿಗಳು ಮತ್ತು ಮಹಾಪುರುಷರು ನೆಲದ ಮರೆಯ ನಿಧಾನದಂತೆ, ಎಲೆಯ ಮರೆಯ ಕಾಯಿಯಂತೆ ವಾಸಮಾಡಿಕೊಂಡಿರುವುದು ಗಮನಾರ್ಹ.

## ಋಣಂ ಕೃತ್ವಾ ಕಾಶೀಂ ಗಚ್ಛೇತ್ :

ಚಾರ್ವಾಕರು ಹೇಳುತ್ತಾರೆ–**'ಋಣಂ ಕೃತ್ವಾ ಘೃತಂ ಪಿಬೇತ್'** ಎಂದು. ಸಾಲ ಮಾಡಿಯಾದರೂ ಸರಿ, ತುಪ್ಪವನ್ನು ಕುಡಿಯಬೇಕಂತೆ. ಅದೇ ರೀತಿ ಭಾರತೀಯ ಭಾವನಾ–ಪ್ರಪಂಚದಲ್ಲಿ ಮತ್ತು ಭಾವುಕ ಜನಗಳಲ್ಲಿ **'ಋಣಂ ಕೃತ್ವಾ ಕಾಶೀಂ ಗಚ್ಛೇತ್'**;–ಸಾಲ ಮಾಡಿಯಾದರೂ ಸರಿ ಕಾಶಿಗೆ ಹೋಗಲೇಬೇಕು–ಎಂಬ ದೃಢವಾದ ಭಾವನೆಯು ಮನೆಮಾಡಿನಿಂತುಕೊಂಡಿದೆ. ಜೀವನದಲ್ಲಿ ಒಮ್ಮೆಯಾದರೂ ಗಂಗಾಸ್ನಾನ ಮತ್ತು ವಿಶ್ವನಾಥ–ದರ್ಶನವಾದರೆ ಸಾಕು 'ತಮ್ಮ ಜೀವನ ಧನ್ಯ' ಎಂಬ ಭಾವನೆ ಅವರದು. ಕಾಶಿಯನ್ನು ನೋಡಿ ಬಂದಾದ ಮೇಲೆ ಅವರು ಸಾಯಲು ತಕರಾರು ಮಾಡುವುದಿಲ್ಲ. ಮೃತ್ಯುವಿಗೆ ಹೆದರುವುದಿಲ್ಲ. ಕಾಶೀ ದರ್ಶನವಾದ ನಂತರ ಆ ಯಮ ಯಾವ ಸಮಯದಲ್ಲಿ ಕರೆದರೂ ಸರಿ ಅವರು ಆತನ ಕರೆಗೆ 'ಓ'ಗೊಡಲು ಸಿದ್ಧರು. ಆದರೆ ಕಾಶಿಯ ದರ್ಶನ ಮಾಡುವ ಮೊದಲೇ ಅವರು ಸಾಯಲು ಇಷ್ಟಪಡುವುದಿಲ್ಲ. ಕೈ ಕಾಲು ಗಟ್ಟಿಯಾಗಿರುವಾಗ ಒಮ್ಮೆಯಾದರೂ ಕಾಶಿಗೆ ಹೋಗಿ

ಬರಲೇಬೇಕು ಎಂಬುವುದು ಪ್ರತಿಯೊಬ್ಬ ಭಾರತೀಯನ ಬಯಕೆ. ಕಾಶಿಯು ಅಷ್ಟೊಂದು ಆಳವಾಗಿ ಬೇರು ಬಿಟ್ಟಿದೆ, ಭಾರತೀಯರ ಭಾವನಾ–ಪ್ರಪಂಚದಲ್ಲಿ !!

## ಬರವಲ್ಲ ! ಅಬ್ಬರ !!
## ಮಠ–ಮಂದಿರಗಳ ಜಾತ್ರೆ :

ಜಗದ್ವಿಖ್ಯಾತ ಕಾಶಿಯಲ್ಲಿ ಮಠ–ಮಂದಿರಗಳ ಬರವಲ್ಲ, ಅಬ್ಬರವೇ ಇದೆ ಎಂದು ಹೇಳಬಹುದು. ಕಾಶಿಯ ತುಂಬೆಲ್ಲ ಮಠ–ಮಂದಿರಗಳು ಹಾಸುಹೊಕ್ಕಾಗಿ ತುಂಬಿಕೊಂಡಿವೆ. ಮಠ–ಮಂದಿರಗಳ ಜಾತ್ರೆಯೇ ಬಂದು ಸೇರಿಕೊಂಡಂತಿದೆ. ನಗರ ಸರ್ವೇಕ್ಷಣಾ ದಾಖಲೆಯ ಪ್ರಕಾರ ಈ ಮಹಾನಗರದಲ್ಲಿ ೧೫೦೦ಕ್ಕಿಂತಲೂ ಹೆಚ್ಚು ದೇವಾಲಯಗಳು ಮತ್ತು ೩೦೦ಕ್ಕಿಂತಲೂ ಹೆಚ್ಚು ಮಠಗಳು ಇವೆ ಎಂಬುದು ಖಚಿತವಾಗಿದೆ ಮತ್ತು ಈ ಸಂಖ್ಯೆ ದಿನೇ ದಿನೇ ಬೆಳೆಯುತ್ತಲಿದೆ ಎಂಬುದು ಅಷ್ಟೇ ಸತ್ಯವಾದ ಸಂಗತಿ.

## ಜಂಗಮವಾಡಿ ಮಠ :

ಇಷ್ಟೊಂದು ದಟ್ಟವಾಗಿರುವ ಮಠ--ಮಂದಿರಗಳ ಗುಂಪಿನಲ್ಲಿಯೂ ವೀರಶೈವರ ಜ್ಞಾನಪೀಠವಾದ ಜಂಗಮವಾಡಿ ಶ್ರೀಮಠದ 'ಕೀರ್ತಿ ಶಿಖರ' ವು ಎದ್ದು ಕಾಣುತ್ತದೆ. ಕಾಶಿಯ ಕೆಲ ಅತ್ಯಂತ ಪ್ರಾಚೀನ ಮಠಗಳಲ್ಲಿ ಜಂಗಮವಾಡಿ ಶ್ರೀಮಠಕ್ಕೆ ಮೊದಲ ಸ್ಥಾನ ಸಂದಾಯವಾಗಿದೆ. ಶ್ರೀಮಠದ ಐತಿಹಾಸಿಕ ಬೇರುಗಳು ಅತ್ಯಂತ ಪ್ರಾಚೀನವಾಗಿವೆ. ಇದುವರೆಗಿನ ಐತಿಹಾಸಿಕ ಸಂಶೋಧನೆಗಳ ಪ್ರಕಾರ ಈ ಶ್ರೀಮಠವು ಕ್ರಿ. ಶ. ಆರನೆಯ ಶತಮಾನಕ್ಕಿಂತಲೂ ಪ್ರಾಚೀನವಾದುದು ಎಂದು ತಿಳಿದುಬಂದಿದೆ. ಕಾಶೀ ದೇಶದ ಅಂದಿನ ಮಹಾರಾಜನಾದ ರಾಜಾ ಜಯನಂದದೇವನು ಈ ಶ್ರೀಮಠದ ಮಹಿಮಾತಿಶಯಕ್ಕೆ ಮಣಿದು ಅಂದಿನ ಪೀಠಾಧೀಶ್ವರರಿಗೆ ವಿಕ್ರಮ ಸಂವತ್ಸರ ಕ್ರಿ. ಶ. ೫೦೪ ರಲ್ಲಿ ಗಂಗಾ ನದಿಯ ದಂಡೆಯಲ್ಲಿರುವ ಫಲವತ್ತಾದ ಭೂಮಿಯನ್ನು ದಾನವಾಗಿ ಕೊಟ್ಟ–ಈ ಐತಿಹಾಸಿಕ ವಿಷಯವನ್ನು ದಾಖಲಿಸಿಕೊಂಡ ದಾನಪತ್ರದ ತಾಮ್ರಶಾಸನವು ಇದುವರೆಗೂ ಶ್ರೀಪೀಠದಲ್ಲಿದ್ದು ಅದು ಸರಕಾರದಿಂದ ಅಂಗೀಕರಿಸಲ್ಪಟ್ಟಿದೆ. ಇದು ಅಲ್ಲದೆ, ಇನ್ನೂ ಅನೇಕ ಹಿಂದೂ ಅರಸರು ಮತ್ತು ರಾಜ–ಮಹಾರಾಜರುಗಳು ಶ್ರೀಮಠಕ್ಕೆ ತಮ್ಮ ಭಕ್ತಿ–ಶಕ್ತಿಗಳಿಗನುಗುಣವಾಗಿ ದಾನ–ದತ್ತಿ ಮತ್ತು ಗೌರವಗಳನ್ನು ಸಲ್ಲಿಸಿದುದುಂಟು.

## ಖಾವಂದರ ಕಾಣಿಕೆ :

ಬರೀ ಹಿಂದೂ ಅರಸರಷ್ಟೇ ಅಲ್ಲ, ಮುಸ್ಲಿಂ ನವಾಬರು ಮತ್ತು ಖಾವಂದರು ಕೂಡ ಶ್ರೀಮಠದ ಪರಮಭಕ್ತರಾಗಿದ್ದುಕೊಂಡು ಶ್ರೀಮಠಕ್ಕೆ ತಮ್ಮ ಗೌರವವನ್ನು

ಸಲ್ಲಿಸಿರುವುದನ್ನು ಇತಿಹಾಸದ ಪುಟಗಳು ದಾಖಲಿಸಿಕೊಂಡಿವೆ. ಖ್ಯಾತ ಮುಸ್ಲೀಂ ದೊರೆಗಳು ಮತ್ತು ಮೊಘಲ ಚಕ್ರವರ್ತಿಗಳಾದ ಶಹಾಜಹಾನ, ಜಹಾಂಗೀರ, ಅಕಬರ ಮತ್ತು ಮೊಹಮ್ಮದ ಬಾದಶಹ ಇವರೇ ಮೊದಲಾದವರು ಶ್ರೀಮಠದ ವ್ಯಕ್ತಿತ್ವಕ್ಕೆ ತಲೆಬಾಗಿ ಅನೇಕ ದಾನಗಳನ್ನು ನೀಡಿದುದುಂಟು. ಈ ಶ್ರೀಮಠದ ಇನ್ನೊಂದು ವೈಶಿಷ್ಟ್ಯವೆಂದರೆ–ಹಿಂದೂ ಧರ್ಮದ ಮೇಲಣ ಗಾಳಿಯು ಕೂಡ ಮೈಗೆ ಸೋಂಕಿದರೆ ಉರಿದು ಬೀಳುತ್ತಲಿದ್ದ ಔರಂಗಜೇಬನು ಈ ಶ್ರೀಮಠದ ಪ್ರವೇಶದ್ವಾರಗಳನ್ನು ಪ್ರವೇಶಿಸುತ್ತಲೇ ಪರಿವರ್ತಿತನಾದ. ಆತನ ಕ್ರೌರ್ಯ ಶಾಂತವಾಯಿತು. ಆತನ ಅಹಂಕಾರದ 'ಹೂಂಕಾರ'ದ ಹುಟ್ಟಡಗಿತು. ಆತ ಶ್ರೀಮಠದ ಪ್ರಭಾವಕ್ಕೆ ಒಳಗಾಗಿ ಶ್ರೀಮಠದ ಪರಮಭಕ್ತನಾಗಿ ಮರಳಿದ ಮತ್ತು ಶ್ರೀಮಠಕ್ಕೆ ತನ್ನ ಭಕ್ತಿಕಾಣಿಕೆಯನ್ನು ಸಮರ್ಪಿಸಿದ. ಈ ವಿಧವಾಗಿ ಮುಸ್ಲೀಂ ಖಾವಂದರ ಕಾಣಿಕೆಗಳಿಂದಲೂ ಶ್ರೀಮಠದ ಅರ್ಥಸಂಪತ್ತು ಶ್ರೀಮಂತವಾಗಿದುದು ಗಮನಾರ್ಹವಾಗಿದೆ.

## ಕೊಡಗು ಅರಸರ ವಾಸ :

ಕರ್ನಾಟಕದ ಕೊಡಗು ಅರಸರುಗಳು ಈ ಶ್ರೀಮಠದ ಪರಮಭಕ್ತರು. ಈ ಶ್ರೀಮಠದೊಂದಿಗಿನ ಅವರ ಸಂಬಂಧ ಅತ್ಯಂತ ಘನಿಷ್ಠವಾದುದು. ಅವರು ಮತ್ತು ಅವರ ಕುಟುಂಬ–ಪರಿವಾರಗಳು ಕಾಶಿಗೆ ಬಂದು ಈ ಶ್ರೀಮಠದಲ್ಲಿಯೇ ವರ್ಷಾರು ತಿಂಗಳುಗಳವರೆಗೆ ಇಲ್ಲಿನ ಜಗದ್ಗುರುಗಳ ಸೇವೆಯನ್ನು ಮಾಡಿಕೊಂಡಿರುತ್ತಿದ್ದರು. ಅವರು ಮಠದ ಒಂದು ಅವಿಭಾಜ್ಯ ಅಂಗವಾಗಿ ನಿಂತುಕೊಂಡಿದ್ದರು. ಕೊಡಗು ಅರಸರ ರಾಣಿ–ಮಹಾರಾಣಿಯರು ಹಾಗೂ ರಾಜಮಾತೆಯರು ಅತ್ಯಂತ ಭಕ್ತಿ–ವಿಶ್ವಾಸಗಳಿಂದ ಈ ಮಠದ ಶ್ರೀಸಾನ್ನಿಧ್ಯದಲ್ಲಿ ಇದ್ದುಕೊಂಡಿರುತ್ತಿದ್ದರು ಅಷ್ಟೇ ಅಲ್ಲ, ಕೆಲವರಂತೂ 'ಕಾಶೀವಾಸ' ಮಾಡುತ್ತ, ಗುರುಸೇವೆ ಮಾಡುತ್ತ ಇಲ್ಲಿಯೇ ದೇಹವನ್ನು ಬಿಟ್ಟು ಶಿವೈಕ್ಯರಾದುದುಂಟು. ಕೊಡಗು ಅರಸರ ಹಾಗೂ ರಾಜಮಾತೆಯರ ಕೆಲವು ಸಮಾಧಿ–ಮಂದಿರಗಳು ಮತ್ತು ಸ್ಮಾರಕಗಳು ಈಗಲೂ ಮಠದ ಆವರಣದಲ್ಲಿದ್ದು ಕೊಂಡಿರುವುದನ್ನು ನಾವು ಕಾಣಬಹುದಾಗಿದೆ.

## ಸಾರಸ್ವತ ಲೋಕದ ಹೆಮ್ಮೆಯ ಕಿರೀಟ :

ಜಂಗಮವಾಡಿ ಶ್ರೀಮಠವು ಒಂದು ಪವಿತ್ರ ಧಾರ್ಮಿಕ ಕೇಂದ್ರವಷ್ಟೇ ಅಲ್ಲ, ಅದು ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕೇಂದ್ರವೂ ಆಗಿದೆ. ಉತ್ತರ ಹಾಗೂ ದಕ್ಷಿಣ ಭಾರತೀಯ ಸಂಸ್ಕೃತಿಗಳ ಸುಮಧುರ ಬೆಸುಗೆಗೆ ಕಾರಣವಾಗಿದೆ. ತಪಸ್ವಿಗಳು,

ಅನುಭಾವಿಗಳು, ವಿದ್ವಾಂಸರು, ಮಹಂತರು ಮತ್ತು ಅದ್ವಿತೀಯ ಅದ್ಭುತ ಶಕ್ತಿಸಂಪನ್ನರಾದ ಈ ಶ್ರೀಮಠದ ಪೀಠಾಧೀಶ್ವರರು ಶ್ರೀಮಠದ ಇತಿಹಾಸವನ್ನು ಶ್ರೀಮಂತಿಸುವಲ್ಲಿ 'ಅಹಂಭೂಮಿಕೆ'ಯನ್ನು ನಿರ್ವಹಿಸಿದ್ದಾರೆ. ಅವರೆಲ್ಲರೂ ತಮ್ಮ ತ್ಯಾಗ, ತಪಸ್ಸು, ಜ್ಞಾನ ಮತ್ತು ಪರಿಶ್ರಮಗಳ ಪ್ರತಿಫಲವನ್ನೆಲ್ಲ ಶ್ರೀಮಠದ ಉತ್ತರೋತ್ತರ ಪ್ರಗತಿ ಮತ್ತು ಅಭಿವೃದ್ಧಿಗಳಿಗಾಗಿ ವಿನಿಯೋಗಿಸಿದ್ದಾರೆ. ಈ ಶ್ರೀಮಠದಲ್ಲಿ ಯಾವತ್ತೂ ವಿದ್ವತ್ತು ಮತ್ತು ಜ್ಞಾನಗಳಿಗೇ 'ಮೊದಲ ಮರ್ಯಾದೆ' ಮತ್ತು 'ಅಗ್ರವೀಳ್ಯ'. ಅಂತಲೇ ಈ ಶ್ರೀಮಠವು ಕಾಶಿಯ ಒಂದು ಪ್ರಮುಖ ಶೈಕ್ಷಣಿಕ ಕೇಂದ್ರವೂ ಅಹುದು. ಅಂದಿನಿಂದಲೂ ಗುರುಕುಲವನ್ನು ಬದುಕಿಸಿಕೊಂಡು ಬೆಳೆಯಿಸಿಕೊಂಡು ಬಂದ ಈ ಶ್ರೀಮಠವು ವಿದ್ಯಾರ್ಥಿಗಳಿಗೆ ಮತ್ತು ಜಿಜ್ಞಾಸುಗಳಿಗೆ ಯಾವತ್ತೂ ಅನ್ನ-ಆಶ್ರಯಗಳನ್ನಿತ್ತು ಸಂಸ್ಕೃತ ಹಾಗೂ ಸಂಸ್ಕೃತಿಗಳನ್ನು ಓದಿಸಿಕೊಂಡು ಬಂದಿದೆ. ಶ್ರೀಮಠದ ವಿಶ್ವಾರಾಧ್ಯ ಗುರುಕುಲವು ನಾಡು-ನುಡಿಗಳಿಗೆ ಅನೇಕ ವಿದ್ವಾಂಸರನ್ನು ಮತ್ತು ಬಹುಮುಖ ಪ್ರತಿಭೆಯ ದೊಡ್ಡ ವ್ಯಕ್ತಿಗಳನ್ನು ಕೊಟ್ಟು 'ಹೆಮ್ಮೆಯ ಕಿರೀಟ'ವನ್ನು ಧರಿಸಿಕೊಂಡಿದೆ.

## ಕಾಶಿಯ ಗೌರವ :

ಜಂಗಮವಾಡಿ ಶ್ರೀಮಠವು ಕಾಶಿಯ ಗೌರವವಾಗಿದೆ. ಈ ಶ್ರೀಮಠದ ಸಾನ್ನಿಧ್ಯಕ್ಕೆ ಯಾರೇ ಬರಲಿ ಅವರಲ್ಲಿ ಭಕ್ತಿರಸದ ಸಂಚಾರವಾಗುತ್ತದೆ. ಅವರಲ್ಲಿ ವಿನಯ ಹಾಗೂ ವಿನಮ್ರತೆಗಳು ಮನೆಮಾಡಿ ನಿಂತುಕೊಳ್ಳುತ್ತವೆ. ಅಹಂಕಾರ ದುರಹಂಕಾರಗಳ ಕಟ್ಟಡಗಳು ಕುಸಿದುಬೀಳುತ್ತವೆ. ಮೈ-ಮನಗಳ ತುಂಬೆಲ್ಲ ಸಾತ್ವಿಕ ಚೇತನವು ತುಂಬಿನಿಂತುಕೊಳ್ಳುತ್ತದೆ. ಈ ಶ್ರೀಮಠವು ಒಂದು ತಪೋಭೂಮಿ. ಈ ಶ್ರೀಮಠದ ಪರಿಸರದಲ್ಲಿ ತಪಸ್ಸಿನ ತರಂಗಗಳು ತುಂಬಿಕೊಂಡಿವೆ. ಅಂತಲೇ ಶ್ರೀಮಠದ ಪವಿತ್ರ ಪರಿಸರದ ಸ್ಪರ್ಶವಾಗುತ್ತಲೇ ಕತ್ತಿ ಎತ್ತಿ ಬಂದವರು ಕೈಮುಗಿದು ನಿಲ್ಲುತ್ತಾರೆ. ವಿಕಾರಗಳನ್ನು ಹೊತ್ತು ಬಂದವರು 'ಓಂಕಾರ'ರಾಗಿ ಹೋಗುತ್ತಾರೆ. ಇದುವರೆಗೆ ಉತ್ತರ ಭಾರತದ ಹೃದಯ ಸ್ಥಾನದಲ್ಲಿ ಶ್ರೀಮಠದ ಕೀರ್ತಿಯು ಅಬಾಧಿತವಾಗಿ ಮತ್ತು ಅನೂಚಾನವಾಗಿ ಮುಂದುವರಿದುಕೊಂಡು ಬಂದಿರುವುದು ವೀರಶೈವರೆಲ್ಲರೂ ಹೆಮ್ಮೆಪಡಬೇಕಾದ ವಿಷಯವೇ ಸರಿ.

## ವೀರಶೈವರ ಜ್ಞಾನ-ಸಿಂಹಾಸನ :

ಕಾಶಿಯ ಜಂಗಮವಾಡಿ ಮಠವೇ ವೀರಶೈವರ ಜ್ಞಾನಪೀಠ ಮತ್ತು ಜ್ಞಾನ ಸಿಂಹಾಸನ. ಉತ್ತರ ಭಾರತದ ತುಂಬೆಲ್ಲ ವೀರಶೈವ ಸಂಸ್ಕೃತಿಯ ಸುಗಂಧವು

ಪಸರಿಸಿಕೊಳ್ಳುವಂತೆ ಮಾಡಿದ ವೀರಶೈವ ಜನ–ಜನಾಂಗದ ಪರಮ ಪವಿತ್ರ ಆರಾಧ್ಯ ಸ್ಥಳ. ಲಿಂಗವನ್ನು ಚರವಾಗಿಸಿ ಭಕ್ತರ ಕೈಗೆ ಕೊಟ್ಟು ಜ್ಞಾನವನ್ನು ಜಂಗಮಿಸಿದ ಜಂಗಮರ ಪುಣ್ಯಭೂಮಿ ಇದು.

ಜಗದ್ಗುರು ಶ್ರೀ ವಿಶ್ವಾರಾಧ್ಯರು ಕಾಶೀ ಜ್ಞಾನಪೀಠದ ಆದಿ ಜಗದ್ಗುರುಗಳು. ಶ್ರೀಮದ್ವೀರಶೈವ ಮಹಾಮತ ಸಂಸ್ಥಾಪಕರಲ್ಲೊಬ್ಬರಾದ ಇವರು ಶಿವನಾಣತಿಯಂತೆ ಶಿವನ ಈಶಾನ ಮುಖದಿಂದ 'ದೇವ ಭಾಗೀರಥಿ' ಗಂಗಾ–ತಟಾಕದಲ್ಲಿರುವ ಶ್ರೀ ವಿಶ್ವನಾಥ ಲಿಂಗದಿಂದ ಮಹಾಶಿವರಾತ್ರಿಯ ಪರ್ವದಿನದಂದು ಪ್ರಾದುರ್ಭವಿಸಿದರು. ಶಿವಮುಖಸಂಜಾತರು ಮತ್ತು ಲಿಂಗೋದ್ಭವರಾದ ಆದಿಜಗದ್ಗುರುಗಳು ಕೃತಯುಗದಲ್ಲಿ ಶ್ರೀ ಪಂಚಾಕ್ಷರ ಶಿವಾಚಾರ್ಯರೆಂದು, ತ್ರೇತಾಯುಗದಲ್ಲಿ ಶ್ರೀ ಪಂಚವಕ್ತ್ರ ಶಿವಾಚಾರ್ಯ ರೆಂದು, ದ್ವಾಪರಯುಗದಲ್ಲಿ ಶ್ರೀ ವಿಶ್ವಕರ್ಣ ಶಿವಾಚಾರ್ಯರೆಂದು ಮತ್ತು ಕಲಿಯುಗದಲ್ಲಿ ಶ್ರೀ ವಿಶ್ವಾರಾಧ್ಯ ಶಿವಾಚಾರ್ಯರೆಂದು ವಿಖ್ಯಾತರಾದರು. ಪರಮಪೂಜ್ಯ ಜಗದ್ಗುರುಗಳು ಆಯಾ ಯುಗಗಳಲ್ಲಿ ದೇಹಧಾರಣ ಮಾಡಿ ಬಂದು ವೀರಶೈವ ಧರ್ಮ ತತ್ತ್ವ ಪ್ರಣಾಳಿಯನ್ನು ಮತ್ತು ಆಚಾರ–ಸಂಹಿತೆಯನ್ನು ಜನಜೀವನದ ಜೀವವಾಹಿನಿಯ ಮಧ್ಯ ಪ್ರಚುರಗೊಳಿಸಿ ವೀರಶೈವ ಸಿದ್ಧಾಂತಗಳನ್ನು ಜನರ ಭಾವ–ವಾಹಿನಿಯಲ್ಲಿ ನಿರಂತರವಾಗಿ ಪ್ರವಹಿಸಿಕೊಂಡು ಬರುವಂತೆ ಮಾಡಿದರು.

## ಆ ದೂರ್ವಾಸರ ಗುರುಗಳೇ !! :

ವೀರಶೈವರ ಜ್ಞಾನಪೀಠವಾದ ಜಂಗಮವಾಡಿಮಠದ ಐತಿಹಾಸಿಕ ಪುಟಗಳ ಅವಲೋಕನವನ್ನು ಮಾಡಿದಾಗ ಈ ಶ್ರೀಪೀಠ ಪರಂಪರೆಯಲ್ಲಿ ಅನೇಕ ಅಸದೃಶ ಮಹಿಮಾಸಂಪನ್ನರು ಮತ್ತು ಅಪ್ರತಿಮ ವಿದ್ವಾಂಸರಾದ ಪೀಠಾಚಾರ್ಯರು ಶ್ರೀಪೀಠದ ಮಹಾಮಣಿಹವನ್ನು ಹೊತ್ತು ಇವರ ಕೀರ್ತಿಯು ಯಾವತ್ತೂ ಹಿಂದೆ ತಿರುಗಿ ನೋಡದಂತೆ ಮುನ್ನಡೆಯಿಸಿಕೊಂಡು ಬಂದಿರುವುದು ನಮ್ಮ ಗಮನ ಸೆಳೆಯುತ್ತದೆ. ದ್ವಾಪರ ಯುಗದಲ್ಲಿ ಈ ಶ್ರೀಪೀಠದ ಜ. ಶ್ರೀ ವಿಶ್ವಕರ್ಣ ಶಿವಾಚಾರ್ಯರು, ತನ್ನ ಪಿತ್ತ ಪ್ರಕೃತಿ ಮತ್ತು ಶೀಘ್ರ ಶಾಪ–ಕೋಪಗಳಿಗಾಗಿ ಪುರಾಣೇತಿಹಾಸಗಳಲ್ಲಿ ಪ್ರಸಿದ್ಧನಾದ ಮಹಾಜ್ಞಾನಿ ದೂರ್ವಾಸ ಮುನಿಗೆ ವೀರಶೈವ ಸಿದ್ಧಾಂತವನ್ನು ಬೋಧಿಸಿದರು. ಜಗದ್ಗುರುಗಳು ದೂರ್ವಾಸನಿಗೆ ಜ್ಞಾನೋಪದೇಶವನ್ನು ಮಾಡಿದ ಆ ಪರಮ ಪವಿತ್ರ ಸ್ಥಳವೇ ಇಂದು ಕಾಶೀ ಶ್ರೀಪೀಠದಲ್ಲಿ 'ಜ್ಞಾನಪೀಠ'ವೆಂದು ಕರೆಯಲ್ಪಟ್ಟು ಪೂಜೆ ಗೊಳ್ಳುತ್ತಲಿದೆ. ಈ ಶ್ರೀಪೀಠದ ಪರಮಪೂಜ್ಯ ಆಚಾರ್ಯರು ಅಶಾಂತರನ್ನು ಶಾಂತರನ್ನಾಗಿಸಿದರು. ಅಜ್ಞರನ್ನು ಸುಜ್ಞರನ್ನಾಗಿಸಿದರು. ಕ್ರೌರ್ಯವನ್ನೇ ಕರುಣೆಯ ನ್ನಾಗಿಸಿದರು. ಕ್ರೋಧವನ್ನೇ ಪ್ರಸಾದವನ್ನಾಗಿಸಿದರು. ಅಸಂತುಷ್ಟರನ್ನು ತುಷ್ಟರನ್ನಾಗಿಸಿದರು. ಈ ಪೀಠದ ಪೀಠಾಚಾರ್ಯರು ಮಾಡಿದ ಇತರ ಪವಾಡಗಳಿಗಿಂತಲೂ ಅವರು

ಮಾನವೀಯ ಮನಸ್ಸಿನ ಮೇಲೆ ಮತ್ತು ಸ್ವಭಾವದ ಮೇಲೆ ಮಾಡಿದ ಪವಾಡವು ಅನುಪಮವಾದುದು ಮತ್ತು ದಾಖಲಾರ್ಹವಾದುದು.

## ಪಕ್ವವಾಗಲಿ ಮಾನಸ :

ಪರಮಪೂಜ್ಯ ಈ ಶ್ರೀಪೀಠದ ಜಗದ್ಗುರುಗಳು ಕೈಯಲ್ಲಿ ಬಿಲ್ವವೃಕ್ಷದ ದಂಡವನ್ನು, ಪೀತ(ಸುವರ್ಣ)ವರ್ಣದ ಕಮಂಡಲುವನ್ನು ಮತ್ತು ಹಳದಿ ವರ್ಣದ ಧ್ವಜವನ್ನು ಹಿಡಿದು ಸಂಚರಿಸುತ್ತಾರೆ. ಹಳದಿ ವರ್ಣವು ಪರಿಪಕ್ವತೆಯ ಪ್ರತೀಕ. ಹಳದಿಯಾಗಿರುವುದೆಲ್ಲ ಮಾಗಿದೆ ಮತ್ತು ಪರಿಪಕ್ವಗೊಂಡು ಫಲಫಲಿಸುತ್ತದೆ ಎಂದು ಅರ್ಥ. ಜನ–ಮಾನಸವು ಪರಿಪಕ್ವಗೊಳ್ಳಬೇಕು. ಜನರ ಭಾವ–ಭಾವನೆಗಳು ಮಾಗಬೇಕು. ಅವರ ಅನುಭವ ಹಣ್ಣಾಗಿ ನಿಂತುಕೊಳ್ಳಬೇಕು. ಪರಿಪಕ್ವಗೊಂಡ ಭಾವ–ಅನುಭಾವಗಳಿಂದ ಪರಿಪೂರ್ಣತೆಯತ್ತ ಹೆಜ್ಜೆ ಇಡಲು ಸಾಧ್ಯವೆಂಬುದನ್ನು ಈ ವರ್ಣವು ಸಾರಿಹೇಳುತ್ತದೆ. ಪರಿಪಕ್ವತೆಗೆ ಮತ್ತು ಪೂರ್ಣತೆಗೆ ಕರೆಕೊಡುವ ಈ ಪೀಠವು ಅನುಭವಿಗಳ ತೂಕವನ್ನು ಹೆಚ್ಚಿಸಿದೆ. ಈ ಪೀಠದ ಪೀಠಾಚಾರ್ಯರು ಪಂಚ ಮಹಾಭೂತಗಳಲ್ಲಿ ಕೊನೆಯದಾದ 'ಆಕಾಶ ತತ್ತ್ವ'ದ ಅಧಿಪತಿಗಳು. ವೇದಾಗ ಮೋಪನಿಷತ್ತುಗಳ ಸಾರಸರ್ವಸ್ವವನ್ನು ಅವಗ್ರಹಿಸಿದ ಈ ಪೀಠಾಚಾರ್ಯರದು ಸೂಕ್ಷ್ಮ ವೇದ ಪರಂಪರೆ. ಪಂಚಾಕ್ಷರ ಮಂತ್ರದಲ್ಲಿಯ 'ಯ'ಕಾರ ಇವರ ಬೀಜಮಂತ್ರ. ಈ ಪೀಠದ ಭಕ್ತರು ಪಂಚವರ್ಣ ಸೂತ್ರಕ್ಕೆ ಒಳಪಡುತ್ತಾರೆ. ಸ್ಕಂದಸ್ವಾಮಿಯು ಈ ಶ್ರೀಪೀಠದವರ ಗೋತ್ರಪುರುಷ. ಈ ಶ್ರೀಪೀಠಕ್ಕೆ ಸೇರಿದವರೆಲ್ಲ ಸ್ಕಂದಗೋತ್ರಜರೆಂದೇ ಹೇಳಿಕೊಳ್ಳಬೇಕು. ವಿಶ್ವಕರ್ಣರನ್ನು ಗಣಾಧೀಶ್ವರರನ್ನಾಗಿ ಪಡೆದ ಈ ಶ್ರೀಪೀಠಕ್ಕೆ ಸಂಬಂಧಿಸಿದವರೆಲ್ಲ ವಿಶ್ವಕರ್ಣ ಶಾಖೆಗೆ ಸೇರಿದವರಾಗಿರುತ್ತಾರೆ. ಈ ಶ್ರೀಪೀಠದ ಪೀಠಾಧೀಶ್ವರರನ್ನು 'ಜ್ಞಾನ ಸಿಂಹಾಸನಾಧೀಶ್ವರ'ರೆಂದು ಕರೆಯುತ್ತಾರೆ. ಈ ಶ್ರೀಪೀಠವು ಜ್ಞಾನ ಮತ್ತು ವಿದ್ವತ್ತುಗಳ ವೈಭವಕ್ಕೆ ಹೆಸರು ಮಾಡಿದೆ. ಕಾಶಿಯ ಶ್ರೀಪೀಠವನ್ನು ಜನಗಳು 'ವಿದ್ವತ್ ಪೀಠ'ವೆಂದೇ ಗುರುತಿಸಿ ಗೌರವಿಸುತ್ತಾರೆ.

## ಅತ್ತ... ಇತ್ತ... ಎತ್ತೆತ್ತಲೂ :

ಈ ಜ್ಞಾನಪೀಠವು ದೇಶದಾದ್ಯಂತ ಮತ್ತು ಹೊರದೇಶಗಳಲ್ಲಿಯೂ ಕೂಡ ತನ್ನ ಅನೇಕ ಶಾಖಾಮಠಗಳನ್ನು ಹೊಂದಿದೆ. ಅವುಗಳಲ್ಲಿ ಕೆಲವನ್ನು ಈ ಮುಂದೆ ಹೆಸರಿಸಲಾಗಿದೆ. ಅಲಹಾಬಾದ–ಪ್ರಯಾಗದಲ್ಲಿನ ಗಂಗಾತಟಾಕದಲ್ಲಿರುವ ಜಂಗಮವಾಡಿ ಮಠ, ಪೂಣಾ ನಗರದ ಸದಾಶಿವಪೇಟೆಯಲ್ಲಿರುವ ವಿಶ್ವಾರಾಧ್ಯ ವಿದ್ಯಾರ್ಥಿನಿಲಯ ಮತ್ತು ಜಂಗಮವಾಡಿಮಠ, ಮಂಗಳವೇಡಾ (ಮಹಾರಾಷ್ಟ್ರ) ವಿಶ್ವಾರಾಧ್ಯ ವಿದ್ಯಾರ್ಥಿ ವಸತಿಗೃಹ ಮತ್ತು ಮಠ, ಆಂಧ್ರಪ್ರದೇಶದ ವಿಜಯವಾಡಾದಲ್ಲಿರುವ ಶ್ರೀ ವಿಶ್ವಾರಾಧ್ಯಮಠ

ಮತ್ತು ನೇಪಾಳದ ರಾಜಧಾನಿ ಕಾಟಮಂಡುವಿನ ಭಕ್ತಪುರದಲ್ಲಿರುವ ಜಂಗಮಮಠ. ಇವೆಲ್ಲವು ಕಾಶೀ ಜಂಗಮವಾಡಿಮಠದ ಆಡಳಿತ ಕಕ್ಷೆಗೆ ಸೇರಿಕೊಂಡಿವೆ. ಇನ್ನುಳಿದ ಹಾಗೆ ಶ್ರೀಪೀಠಕ್ಕೆ ಸಂಬಂಧಪಟ್ಟ ಅನೇಕ ಶಾಖಾಮಠಗಳು ಕರ್ನಾಟಕ, ಮಹಾರಾಷ್ಟ್ರ, ಮಧ್ಯಪ್ರದೇಶ, ಉತ್ತರ ಪ್ರದೇಶ ಇತ್ಯಾದಿಗಳಲ್ಲಿ ಬಹುಸಂಖ್ಯೆಯಲ್ಲಿ ಇದ್ದುಕೊಂಡಿರುವುದು ಶ್ರೀಮಠದ ಕಾರ್ಯವ್ಯಾಪ್ತಿಗೆ ಕನ್ನಡಿ ಹಿಡಿದಂತಿದೆ. ಇದು ಅಲ್ಲದೆ, ಹಿಂದೊಮ್ಮೆ ಕಾಶಿಯ ಬಹುಪಾಲು ಭಾಗವೆಲ್ಲ ಈ ಶ್ರೀಮಠದ ಪ್ರಭುತ್ವಕ್ಕೆ ಒಳಪಟ್ಟಿತ್ತು ಎಂದರೆ ಯಾರೂ ಆಶ್ಚರ್ಯಪಡಬೇಕಿಲ್ಲ. ಈ ಶ್ರೀಪೀಠದ ಪ್ರಭಾವ ಅಷ್ಟೊಂದು ಆಳವಾಗಿ ಅಂದಿನ ರಾಜ–ಮಹಾರಾಜರುಗಳ ಮತ್ತು ಜನಗಳ ಭಾವ–ಮಾನಸದಲ್ಲಿ ಬೇರು ಬಿಟ್ಟಿತ್ತು. ಅಂತಲೇ ಈಗಲೂ ಸಹ ಜ್ಞಾನಪೀಠವೆಂದ ತಕ್ಷಣ ಮೈ ಪುಳಕಿತವಾಗುತ್ತದೆ, ಮನಸ್ಸಿನಲ್ಲಿ ಸಂತೋಷ–ಸಂಭ್ರಮಗಳ ಜಾಗಟೆಗಳು ಬಾರಿಸಿಕೊಳ್ಳತೊಡಗುತ್ತವೆ.

## ವೀರಶೈವರ 'ಅಹಂ' ಜಾಗೃತ :

ಈ ನೂತನ ಶ್ರೀಪೀಠ ಪರಂಪರೆಯಲ್ಲಿ ಕಲಿಯುಗದಲ್ಲಿ ಅವತಾರಧಾರಣ ಮಾಡಿದ ಜ. ವಿಶ್ವಾರಾಧ್ಯ ಶಿವಾಚಾರ್ಯರು ಸುಮಾರು ೧೧೦೦ ವರ್ಷಗಳವರೆಗೆ ದೇಹಧಾರಿಗಳಾಗಿದ್ದು ಅನೇಕ ಲೀಲೆಗಳನ್ನು ಮಾಡುವುದರ ಜೊತೆ ಜೊತೆಯಲ್ಲಿ ದೇಶದ ತುಂಬೆಲ್ಲ ಸಂಚರಿಸಿ ವೀರಶೈವ ಧರ್ಮ–ಸಂಸ್ಥಾಪನೆಯನ್ನು ಮಾಡಿ ವೀರಶೈವ ಸಿದ್ಧಾಂತಗಳನ್ನು ಜನ–ಮನದಲ್ಲಿ ಪ್ರಚುರಗೊಳಿಸಿದರು. ಉತ್ತರ–ದಕ್ಷಿಣಗಳೆಂಬ ಭೇದ–ಭಾವವಿಲ್ಲದೆ ದೇಶದಾದ್ಯಂತ ಅದರಲ್ಲೂ ವಿಶೇಷವಾಗಿ ದೇಶದ ಉತ್ತರ ಭಾಗದಲ್ಲಿ ಸಂಚರಿಸಿ ವೀರಶೈವರ 'ಅಹಂ'ನ್ನು ಎಚ್ಚರಿಸಿದರು.

## 'ಗಾದಿಸ್ವಾಮಿ' 'ಜಂಗಮ ಬಾಬಾ' :

ಜ. ವಿಶ್ವಾರಾಧ್ಯರ ಉತ್ತರಾಧಿಕಾರಿಗಳಾಗಿ ಬಂದು ಜ್ಞಾನಪೀಠವನ್ನು ಅಲಂಕರಿಸಿದ ಜ. ಮಲ್ಲಿಕಾರ್ಜುನ ಶಿವಾಚಾರ್ಯ ಮಹಾಸ್ವಾಮಿಗಳು ಮಹಾನ್ ತಪಸ್ವಿಗಳು ಮತ್ತು ಅಪ್ರತಿಮ ತೇಜೋಮೂರ್ತಿಗಳು. ಇವರು ತಮ್ಮ ಶಿವಯೋಗ ಸಾಮರ್ಥ್ಯದಿಂದ ೩೧೧ ವರುಷಗಳವರೆಗೆ ಜ್ಞಾನಪೀಠಾಧ್ಯಕ್ಷರಾಗಿದ್ದರು. ಲೋಕದಲ್ಲಿ ಯಾವತ್ತೂ ಧರ್ಮಕ್ಕೇ ಜಯವೆಂದು ಸಾರಿ ಹೇಳಿದರು. ತಮ್ಮಲ್ಲಿನ ಅದ್ಭುತ ಯೋಗಶಕ್ತಿಯಿಂದ ಅವರು ಪ್ರತಿನಿತ್ಯ ವಾಯು–ಮಾರ್ಗದಿಂದ ನೇಪಾಳಕ್ಕೆ ಹೋಗಿ ಬರುತ್ತಿದ್ದರಂತೆ. ವೀರಶೈವ ತತ್ತ್ವ ಪ್ರಣಾಳಿಕೆಯನ್ನು ಜನ–ಮಾನಸದಲ್ಲಿ ಭದ್ರಪಡಿಸಿದ ಇವರು ಕೊನೆಗೆ ಸಜೀವ ಸಮಾಧಿಯನ್ನು ಹೊಂದಿದರು. ಅವರು ಜೀವಂತ ಸಮಾಧಿಸ್ಥರಾದ ಆ ಪರಮ ಪವಿತ್ರ ಸ್ಥಳವೇ ಇಂದು 'ಕರ್ತೃಗದ್ದುಗೆ'ಯಾಗಿದ್ದು ಜಂಗಮವಾಡಿಮಠದಲ್ಲಿ ಪ್ರತಿನಿತ್ಯವೂ ಪೂಜೆಗೊಳ್ಳುತ್ತಲಿದೆ. ಕಾಶಿಯ ಜನಕ್ಕೆಲ್ಲ ಇವರು 'ಗಾದಿಸ್ವಾಮಿ' ಮತ್ತು

'ಜಂಗಮ ಬಾಬಾ' ಎಂದೇ ಪರಿಚಿತರು. ಗಾದಿಸ್ವಾಮಿಯ 'ಕರ್ತೃಗದ್ದುಗೆ'ಯು ಜಾಗೃತವಾಗಿದ್ದು ಅದು ಇಷ್ಟಪಟ್ಟು ಬಂದವರ ಕಷ್ಟಗಳನ್ನು ದೂರಮಾಡುತ್ತದಲ್ಲದೆ ಇಷ್ಟಪಟ್ಟವರ ಇಷ್ಟಾರ್ಥಗಳನ್ನು ಈಡೇರಿಸಿಕೊಡುತ್ತಲಿದೆ. ಕಾಶಿಯ ಜನಕ್ಕಂತೂ ಗಾದಿಸ್ವಾಮಿಯ ಮೇಲೆ ತುಂಬು ನಂಬಿಕೆ.

## ಜಗತ್ತೇ ಕಾರ್ಯಕ್ಷೇತ್ರ :

ಜ. ಶ್ರೀ ಮಲ್ಲಿಕಾರ್ಜುನ ಶಿವಾಚಾರ್ಯರ ನಂತರ ಈ ಶ್ರೀಪೀಠವು ೮೪ ಜಗದ್ಗುರುಗಳನ್ನು ಕಂಡಿದೆ. ಶ್ರೀಪೀಠದ ಜಗದ್ಗುರುಗಳೆಲ್ಲ ವೀರಶೈವ ಧರ್ಮಪ್ರಚಾರಕ್ಕಾಗಿ ತಮ್ಮ ಜೀವನ, ವಿದ್ವತ್ತು, ತಪಸ್ಸುಗಳನ್ನೆಲ್ಲ ಗಂಧದ ಕೊರಡಿನಂತೆ ತೇಯ್ದು ವೀರಶೈವ ಧರ್ಮದ ಪರಿಮಳವು ದೇಶದಾದ್ಯಂತ ತುಂಬಿಕೊಳ್ಳುವಂತೆ ಮಾಡಿದರು. ಇಡೀ ಜಗತ್ತೇ ಅವರ ಕಾರ್ಯಕ್ಷೇತ್ರವೆನಿಸಿತ್ತು. ಜನೋದ್ಧಾರ ಮತ್ತು ಜಗದೋದ್ಧಾರಕ್ಕಾಗಿ ಅವರು ತಮ್ಮ ಸಾಧನೆ–ಸಿದ್ಧಿಗಳನ್ನೆಲ್ಲ ಪ್ರಾಂಜಲವಾಗಿ ಬಳಸಿದರು.

## ಹಿನ್ನೋಟ ಮತ್ತು ಹಿನ್ನೆಲೆ :

ಜ. ಮಲ್ಲಿಕಾರ್ಜುನ ಶಿವಾಚಾರ್ಯರ ನಂತರ ಅಧಿಕಾರ ವಹಿಸಿಕೊಂಡವರೆಲ್ಲ ಅವರ ಹೆಸರಿನಿಂದಲೇ ಕರೆಯಲ್ಪಟ್ಟರು. ಆದರೆ ಈ ಪರಂಪರೆ ಮತ್ತು ಸಂಪ್ರದಾಯ ೭೮ನೆಯ ಜಗದ್ಗುರುಗಳಿಂದ ಸ್ವಲ್ಪ ಮಾರ್ಪಾಡನ್ನು ಹೊಂದಿತು. ಶ್ರೀಪೀಠದ ಮುಂದಿನ ಆಚಾರ್ಯರು ಜ. ಮಲ್ಲಿಕಾರ್ಜುನ ಶಿವಾಚಾರ್ಯರು ಎಂಬ ಹೆಸರಿನೊಂದಿಗೆ ತಮ್ಮ ಇನ್ನೊಂದು ಹೆಸರಿನಿಂದಲೂ ಪ್ರಸಿದ್ಧರಾಗತೊಡಗಿದರು. ಜ. ಶ್ರೀ ಶಿವಲಿಂಗ **ಶಿವಾಚಾರ್ಯ ಮಹಾಸ್ವಾಮಿಗಳು (ಪ್ರಥಮ)** (೧೭೫೦–೧೮೩೫)ಕಾಶೀ ಜ್ಞಾನಪೀಠದ **೭೮ನೆಯ ಪೀಠಾಧ್ಯಕ್ಷರು.** ಶಿವಯೋಗ–ಸಂಪನ್ನರಾದ ಇವರ ಜೀವನದ ಒಂದೊಂದು ಕ್ಷಣವೂ ಒಂದೊಂದು ಅದ್ಭುತ ಪವಾಡದಂತಿದೆ. ಜ. ಶ್ರೀ **ಹರೀಶ್ವರ ಶಿವಾಚಾರ್ಯ ಮಹಾಸ್ವಾಮಿಗಳು** (೧೮೩೫–೧೮೭೯) ಇವರು ಶ್ರೀಪೀಠದ **೭೯ನೆಯ ಪೀಠಾಧ್ಯಕ್ಷರು.** ಇವರು ಶಾಂತಿ, ಸ್ಥೈರಣೆ, ಸಮಾಧಾನಗಳ ಜೀವಂತ–ರೂಪದಂತಿದ್ದರು. ಇವರ ಕಾಲದಲ್ಲಿ ಕೊಡಗು ಅರಸರು ಶ್ರೀಪೀಠದ ಪ್ರಭಾವಕ್ಕೆ ಒಳಗಾದರು. ಜ. ಶ್ರೀ **ವೀರಭದ್ರ ಶಿವಾಚಾರ್ಯ ಮಹಾಸ್ವಾಮಿಗಳು (ಪ್ರಥಮ)** ೧೮೭೯–೧೮೯೧. ಶ್ರೀಪೀಠದ ೮೦ನೆಯ **ಪೀಠಾಧ್ಯಕ್ಷರು.** ಜನತೆಯ ಸಾಮಾಜಿಕ ಹಿತಾಸಕ್ತಿಗಳ ಕುರಿತು ಚಿಂತಿಸುತ್ತಿದ್ದ ಇವರು ಶ್ರೀ ಜ. ವಿಶ್ವಾರಾಧ್ಯ ಬ್ಯಾಂಕಿನ ಸಂಸ್ಥಾಪಕರು. ಇವರು ಧರ್ಮ ಮತ್ತು ಸಾಮಾಜಿಕ ಹಿತಾಸಕ್ತಿಗಳ ಸಮನ್ವಯ ಕೇಂದ್ರದಂತಿದ್ದರು. ಜ. ಶ್ರೀ **ರಾಜೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳು** (೧೮೯೧–೧೯೦೭) ಶ್ರೀಪೀಠದ ೮೧ನೆಯ **ಪೀಠಾಧ್ಯಕ್ಷರು.** ಇವರು ಪಂಡಿತರು, ಪಂಡಿತ–ಪ್ರೇಮಿಗಳು, ಶಿವಯೋಗನಿಷ್ಠರು ಮತ್ತು ಶಾಪಾನುಗ್ರಹ

ಸಂಪನ್ನರು. ಇಂಗ್ಲಂಡದ ಪಂಚಮ ಜಾರ್ಜನ ಪಟ್ಟಾಭಿಷೇಕ ಸಮಯದಲ್ಲಿ ಸರಕಾರವೇ ಧುರೀಣತ್ವ ವಹಿಸಿ ಇವರ ಉತ್ಸವವನ್ನು ಮಾಡಿತು. ಸಂಸ್ಕೃತ ಸಾಹಿತ್ಯ ಲೋಕದಲ್ಲಿ ಇವರು ಗಟ್ಟಿಯಾದ ಕೆಲಸವನ್ನು ಮಾಡಿದರು. **ಜ. ಶಿವಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು (ದ್ವಿತೀಯ) (೧೯೦೭–೧೯೩೨) ೮೨ನೆಯ ಪೀಠಾಧ್ಯಕ್ಷರು.** 'ನ್ಯಾಯ', ವ್ಯಾಕರಣಗಳಲ್ಲಿ ಎತ್ತಿದ ಕೈ. ವಿದ್ಯೆ ಹಾಗೂ 'ಧೀ'ಬಲಗಳಿಂದ ಶ್ರೀಮಠದ ಅಭ್ಯುದಯಕ್ಕಾಗಿ ಹಗಲಿರುಳು ಪರಿಶ್ರಮಿಸಿದ ಕೀರ್ತಿ ಇವರದು.

## ಪ್ರತಿಭೆಯ ಮೊತ್ತ :

**ಜಗದ್ಗುರು ಶ್ರೀ ವೀರಭದ್ರ ಶಿವಾಚಾರ್ಯರು (ದ್ವಿತೀಯ) ೧೯೪೪–೧೯೪೮ ಇವರು ಶ್ರೀಪೀಠದ ೮೪ನೆಯ ಪೀಠಾಧ್ಯಕ್ಷರು.** ಇವರನ್ನು ಶ್ರೀಪೀಠದ 'ಪುಣ್ಯ' ಶ್ರೀಪೀಠದ 'ತಪಸ್ಸು' ಎಂದು ಹೇಳಿದರೆ ತಪ್ಪಾಗದು. ಇವರು ಪೀಠಾಧ್ಯಕ್ಷರಾಗಿ ಪೀಠದ ಮೇಲೆ ಇದ್ದ ಅವಧಿ ತುಂಬಾ ಕಡಿಮೆ. ಆದರೆ ಇದುವರೆಗೂ ಶ್ರೀಪೀಠವು ಅವರ ಪ್ರಭಾ ಹಾಗೂ ಪ್ರಭಾವ ವಲಯದಿಂದ ಹೊರಬಂದಿಲ್ಲವೆಂಬುದು ಅತಿಶಯೋಕ್ತಿಯ ಮಾತೇನಲ್ಲ. ಅವರು ಹತ್ತು ಹಲವು ಪ್ರತಿಭೆಗಳ ಸಂಗಮ–ಕ್ಷೇತ್ರದಂತಿದ್ದರು. ಪರಮಪೂಜ್ಯರು ವಿದ್ಯಾರ್ಥಿ, ಅಧ್ಯಾಪಕ, ಸಂಶೋಧಕ, ಲೇಖಕ, ವಿಮರ್ಶಕ, ಕವಿ, ವಾಗ್ಮಿ, ಪಂಡಿತ, ಬಹುಭಾಷಾವಿಶಾರದ, ಬಹುಶ್ರುತ, ಪ್ರಾಚೀನ ಲಿಪಿತಜ್ಞ....... ಏನೆಲ್ಲವೂ ಆಗಿದ್ದರು. ಜಗದ್ಗುರು **ವೀರಭದ್ರ ಶಿವಾಚಾರ್ಯರೆಂದರೆ ಪ್ರತಿಭೆಯ ಒಟ್ಟು ಮೊತ್ತದಂತಿದ್ದರು.** ಅವರ ಜೀವನವೇ ಒಂದು '**ಪ್ರಯೋಗಶಾಲೆ**'ಯಾಗಿತ್ತು. ಅವರಲ್ಲಿನ ಜ್ಞಾನ–ಪಿಪಾಸೆಯು 'ಯಯಾತಿ'ಯಂತಿತ್ತು. ಪರಮಪೂಜ್ಯರು **ವಿದ್ಯೆಯ ಮೇರು ಪರ್ವತ.** ಬಹುಮುಖ ವ್ಯಕ್ತಿತ್ವದ ಜಗದ್ಗುರುಗಳು ತಮ್ಮ ಕಾಲಾವಧಿಯಲ್ಲಿ ಜಂಗಮವಾಡಿಮಠಕ್ಕೆ ಮತ್ತು ಜ್ಞಾನಪೀಠಕ್ಕೆ 'ಜ್ಞಾನಮಂದಿರ'ವನ್ನು ಕೊಟ್ಟರು. ಶ್ರೀಪೀಠದಲ್ಲಿನ ಇವರ ಯುಗವನ್ನು 'ಜ್ಞಾನಯುಗ'ವೆಂದೇ ಹೇಳಬಹುದು. ಇವರ ಕಾಲದಲ್ಲಿ ಜ್ಞಾನಪೀಠದ ಜ್ಞಾನಸಿಂಹಾಸನದ ಎದುರಿನಲ್ಲಿ ಅರಿವಿನ ದರ್ಬಾರೇ ನಡೆಯುತ್ತಿತ್ತು ಎಂದರೆ ಇದು ಸತ್ಯವೇ ಹೆಮ್ಮೆ ಪಡಬೇಕಾದಷ್ಟು ಸತ್ಯ–ಸಂಗತಿ.

## ಬಹುಜನ ಹಿತಾಯ ಮತ್ತು ಬಹುಜನ ಸುಖಾಯ :

**ಜಗದ್ಗುರು ಶ್ರೀ ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳು (೧೯೪೮–೧೯೮೯) ಶ್ರೀಪೀಠದ ೮೫ನೆಯ ಪೀಠಾಧ್ಯಕ್ಷರು.** ಶ್ರೀಪೀಠದ ಸುಮಾರು ೨೦೦ ವರ್ಷಗಳ ಇತ್ತೀಚಿನ ಇತಿಹಾಸದಲ್ಲಿ ಇವರಷ್ಟು ಸುದೀರ್ಘ ಕಾಲಾವಧಿಯವರೆಗೆ ಶ್ರೀಪೀಠದ ಮೇಲೆ ಯಾವ ಜಗದ್ಗುರುಗಳೂ ವಿರಾಜಮಾನರಾಗಿರಲಿಲ್ಲ. ಶ್ರೀಪೀಠದ ವ್ಯಕ್ತಿತ್ವದ ಜೊತೆ ಅವರು ಸಮರಸವಾಗಿದ್ದರು. ಶ್ರೀಪೀಠದ ಆರ್ಥಿಕ–ಬಾಹುಗಳನ್ನು ಬಲಿಷ್ಠಗೊಳಿಸಿ

ಶ್ರೀಪೀಠದ ಆಯ-ಆದಾಯಗಳನ್ನು ಹೆಚ್ಚಿಸಿದ ಕೀರ್ತಿ ಇವರದು. ವಿದ್ಯಾ ಹಾಗೂ ವಿದ್ಯಾರ್ಥಿವತ್ಸಲರಾದ ಪೀಠಾಚಾರ್ಯರು ಮಹಾರಾಷ್ಟ್ರದ ಪ್ರಮುಖ ಸ್ಥಳಗಳಲ್ಲಿ ವಿದ್ಯಾರ್ಥಿನಿಲಯಗಳನ್ನು ಹಾಗೂ ಕಾಶಿಯ ಶ್ರೀ ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾಲಯದಲ್ಲಿ ಶಕ್ತಿ ವಿಶಿಷ್ಟಾದ್ವೈತ ವೇದಾಂತ ವಿಭಾಗವನ್ನು ಪ್ರಾರಂಭಿಸಿದರು. ಶಾಂತ-ಪ್ರಶಾಂತ ಮೂರ್ತಿಗಳಾಗಿದ್ದ ಅವರು ಭಕ್ತರ ಜೊತೆ ನಿಕಟ ಸಂಪರ್ಕ ಹೊಂದಿದ್ದು 'ಬಹುಜನ ಹಿತಾಯ ಬಹುಜನ ಸುಖಾಯ'ಕ್ಕಾಗಿ ಅಹೋರಾತ್ರಿ ಪರಿಶ್ರಮಿಸಿದರು.

## ಸಾಧನೆಯ ಶಿಖರ :

ಇದುವರೆಗಿನ ತನ್ನ ಇತಿಹಾಸದಲ್ಲಿ ಎಂಬತ್ತೈದು ಜಗದ್ಗುರುಗಳ ಇತಿಹಾಸ ವನ್ನು ದಾಖಲಿಸಿಕೊಂಡ ಶ್ರೀಮಂತ ಪರಂಪರೆಯ ಶ್ರೀಪೀಠದ ವರ್ತಮಾನ-ಪರಮಪೂಜ್ಯ ಶ್ರೀ ೧೦೦೮ ಜಗದ್ಗುರು ಡಾ. ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳವರು. ಪರಮಪೂಜ್ಯ ಜಗದ್ಗುರುಗಳು ಸಾಧನೆಯ ಶಿಖರ, ಸಿದ್ಧಿಯ ಸಾಕಾರ ಮತ್ತು ಸಾರಸ್ವತ ಬಾಂದಳದ ಬೆಳ್ಳಿಯ ತಾರೆ. ಪೂಜ್ಯರ ಜೀವನವನ್ನು ಓದಿದರೆ ಮೈ-ಮನಗಳು ಪುಳಕಿತಗೊಳ್ಳುತ್ತವೆ, ಉತ್ಸಾಹದ ಊಟೆಗಳು ಚಿಮ್ಮಿಕೊಳ್ಳುತ್ತವೆ. ಪರಮಪೂಜ್ಯರು ತಮ್ಮ ಜೀವನವನ್ನು ಓದಿಸಿಕೊಂಡು ಹೋಗುವ ಒಂದು 'ಸುಂದರ ಗ್ರಂಥ'ವನ್ನಾಗಿಸಿದ್ದಾರೆ. ಅವರ ಇದುವರೆಗಿನ ಜೀವನದಲ್ಲಿ ಕಠಿಣ ಪರಿಶ್ರಮ ಮತ್ತು ಅಪೂರ್ವ ಸಾಧನೆಗಳ ಪರಿಶುದ್ಧ ಪರಿಮಳವು ತುಂಬಿಕೊಂಡಿದೆ. ಸನ್ನಿಧಿಯವರು ತಮ್ಮ ಜೀವನದಲ್ಲಿ 'ಸಿದ್ಧಿ' ಅಥವಾ 'ಲಕ್ಷ್ಯ' ಎಂಬ 'ಯಶೋಬಿಂದು'ವನ್ನು ತಲುಪಲು ಮೊಲದಂತೆ ಮೊದಲು ಜೋರಾಗಿ ಓಡಿ ದಣಿದು ಆ ನಂತರ ನಿದ್ದೆ ಹೋದವರಲ್ಲ. ಆಮೆಯಂತೆ ನಿರಂತರವಾಗಿ ನಡೆದು ಗುರಿ ಮುಟ್ಟಿದವರು. ಸನ್ನಿಧಿಯವರು ತಮ್ಮಲ್ಲಿಯ ದೊಡ್ಡತನದಿಂದಲೇ ದೊಡ್ಡವರಾದವರು ಮತ್ತು ತಮ್ಮಲ್ಲಿಯ ಪ್ರತಿಭೆಯಿಂದಲೇ ಮಿಂಚಿದವರು. ತಾವು ದೊಡ್ಡವರಾಗುವುದಕ್ಕೆ ಮತ್ತು ಮಿಂಚುವುದಕ್ಕೆ ಅನ್ಯರ ದೊಡ್ಡತನವನ್ನು ಮತ್ತು ಪ್ರತಿಭೆಯನ್ನು ಎರವಲಾಗಿ ಪಡೆದವರಲ್ಲ ಅವರು.

## ಆಚಾರ-ವಿಚಾರಗಳ ಕಮ್ಮಟ :

ಪರಮಪೂಜ್ಯ ಜಗದ್ಗುರುಗಳು ಒಂದು ಸಾತ್ವಿಕ ಚೇತನ. ಅವರೊಂದು ಆಚಾರ-ವಿಚಾರಗಳ ಕಮ್ಮಟ. ವಿದ್ವತ್ತೇ ಅವರ ಸಂಪತ್ತು. ಆಚಾರವೇ ಅವರ ಬಂಡವಾಳ. ಪ್ರಫುಲ್ಲ ವಿಚಾರಗಳೇ ಅವರ ಸಂತತಿ. ಅಧ್ಯಯನವೇ ಅವರ ತಪಸ್ಸು. ಲೆಕ್ಕಣಿಕೆಯೇ ಅವರ ಅರ್ಘ್ಯದ ಸೌಟು. ಕಾಗದವೇ ಅವರಿಗೆ ಮಜ್ಜನ ಪಾತ್ರೆ. ಶಬ್ದಗಳೇ ಅವರ ಮಂತ್ರ. ಪರಮಪೂಜ್ಯ ಸನ್ನಿಧಿಯವರು ತಮ್ಮ ಜೀವನದ ಪ್ರತಿಕ್ಷಣವನ್ನು

ಸಾಧನೆಯ ಒರೆಗಲ್ಲಿಗೆ ತಿಕ್ಕಿ ಅದರಲ್ಲಿ ಸಿದ್ಧಿಯ ಸುಗಂಧವನ್ನು ತುಂಬಿದ್ದಾರೆ. ಕಾಶೀ ಜ್ಞಾನಪೀಠದ 'ಭೂತ' ಮತ್ತು 'ಗತ'ಗಳಷ್ಟೇ ಶ್ರೀಮಂತವಲ್ಲ; ಅದರ 'ವರ್ತಮಾನ'ವು ಕೂಡ ಶ್ರೀಮಂತವಾಗಿದೆ ಎಂಬುವುದನ್ನು ಅವರು ಅಕ್ಷರಶ: ಸಾಬೀತುಪಡಿಸಿದ್ದಾರೆ. ಶ್ರೀಪೀಠದ **'ಅಂದು' ಮತ್ತು ಅಂದಿನಷ್ಟೇ 'ಇಂದು' ಕೂಡ ಸಶಕ್ತವಾಗಿದೆ** ಎಂದು ಜನ–ಮನ ತುಂಬು ಹೃದಯದಿಂದ ಒಪ್ಪಿಕೊಂಡಿದೆ.

## ಇದು ಅಪೂರ್ವ ಪೂರ್ವ :

**ಪರಮಪೂಜ್ಯ ಸನ್ನಿಧಿಯವರ ಗತ ಬದುಕಿನತ್ತ ಪಕ್ಷಿನೋಟವನ್ನು ಹರಿಸಿದಾಗ**– ಪರಮ ಪೂಜ್ಯ ಜಗದ್ಗುರುಗಳು ಕರ್ನಾಟಕ ರಾಜ್ಯದ 'ಬರ' ಮತ್ತು 'ಭಕ್ತಿ'ಗಳೆರಡಕ್ಕೂ ಪ್ರಸಿದ್ಧವಾದ ವಿಜಾಪೂರ ಜಿಲ್ಲೆಯ ಬಾದಾಮಿ ತಾಲೂಕಿನ ಗುಳೇದಗುಡ್ಡದ ಪಕ್ಕದಲ್ಲಿರುವ ತೋಗುಣಸಿ ಗ್ರಾಮದಲ್ಲಿ ದಿನಾಂಕ : **೧೫–೮–೧೯೫೦** ರಂದು ಜನಿಸಿದರು. ತೋಗುಣಸಿಯ ಪುರಾಣಮಠದ ವೇ. ಮೂ. ಸಿದ್ಧಯ್ಯನವರು ಮತ್ತು ಸೌ. ಸಾವಂತ್ರಮ್ಮನವರು ಇವರ ತಂದೆ–ತಾಯಿಗಳು. ಶ್ರೀಗಳು ಬಾಲ್ಯದಿಂದಲೂ ತುಂಬಾ ಪರಿಶ್ರಮಜೀವಿಗಳು. ತಮ್ಮ ಪ್ರಾಥಮಿಕ ಶಾಲಾ ವಿದ್ಯಾಭ್ಯಾಸವನ್ನು ತೋಗುಣಸಿ–ಗುಳೇದಗುಡ್ಡಗಳಲ್ಲಿಯೇ ಪ್ರಾರಂಭಿಸಿದ ಶ್ರೀಗಳು ಕೆಲ ದಿನ ಧಾರವಾಡ ಜಿಲ್ಲೆಯ ಬ್ಯಾಡಗಿಯ ತಮ್ಮ ಆಪ್ತರ ಮನೆಯಲ್ಲಿದ್ದುಕೊಂಡು ಓದನ್ನು ಮುಂದುವರಿಸಿದರು. ಗುಳೇದಗುಡ್ಡದ ಮುನ್ಸಿಪಲ್ ಹೈಸ್ಕೂಲಿನಲ್ಲಿ ತಮ್ಮ ಮಾಧ್ಯಮಿಕ ಶಾಲಾ ವಿದ್ಯಾಭ್ಯಾಸವನ್ನು ಪ್ರಾರಂಭಿಸಿದರು. ಇದೇ ಸಮಯದಲ್ಲಿಯೇ ಅವರು **'ಕೊಳ್ಳದ ಸ್ವಾಮಿ'**ಗಳೆಂದೇ ಪ್ರಸಿದ್ಧರಾದ ಉಭಯವೈದ್ಯ ಮಹಾತಪಸ್ವಿ **ಶ್ರೀ ಅಮರೇಶ್ವರ ಮಹಾಸ್ವಾಮಿಗಳವರ** ಗಮನ ಸೆಳೆದರು. ಶ್ರೀಗಳ ಸಾತ್ವಿಕತೆ ಮತ್ತು ಸರಳತೆ ಪೂಜ್ಯ ಸ್ವಾಮಿಗಳನ್ನು ಆಕರ್ಷಿಸಿತು. ಅವರು ಶ್ರೀಗಳನ್ನು ತಮ್ಮ ಮಠದಲ್ಲಿಯೇ ಇರಿಸಿಕೊಂಡು ಓದಲು ಅವಕಾಶ ಮಾಡಿಕೊಟ್ಟರು. ಈ ಮಧ್ಯದಲ್ಲಿ ಪೂಜ್ಯ ಅಮರೇಶ್ವರ ಸ್ವಾಮಿಗಳು ಶ್ರೀಗಳೇ ತಮ್ಮ **'ಉತ್ತರಾಧಿಕಾರಿ'**ಯೆಂದು ತೀರ್ಮಾನಿಸಿದರು. ತಮ್ಮ ಉತ್ತರಾಧಿಕಾರಿಗಳು ಈ ಶಾಲಾ ಓದನ್ನು ಮುಂದುವರಿಸುವುದಕ್ಕಿಂತಲೂ ಸಂಸ್ಕೃತವನ್ನು ಓದಬೇಕು; ಸಂಸ್ಕೃತ ಭಾಷೆಯಲ್ಲಿ ಅದ್ವಿತೀಯ ಪಂಡಿತರಾಗಬೇಕು–ಎಂದು ಕನಸಿಸಿದ ಅವರು ಶ್ರೀಗಳನ್ನು ಮಾಧ್ಯಮಿಕ ಶಾಲಾ ಓದಿನಿಂದ ನಿವೃತ್ತಗೊಳಿಸಿ ಸೊಲ್ಲಾಪುರದ ಸಂಸ್ಕೃತ ಪಾಠಶಾಲೆಗೆ ಕಳುಹಿಸಿದರು.

## ಸಂಸ್ಕೃತಕ್ಕೆ ಪರಿಚಯ :

ಶ್ರೀಗಳನ್ನು ಸಂಸ್ಕೃತ ಭಾಷೆ ಮತ್ತು ಓದಿಗೆ ಪರಿಚಯಿಸಿದ ಶ್ರೇಯಸ್ಸು **ಪೂಜ್ಯ ಶ್ರೀ ಅಮರೇಶ್ವರ ಸ್ವಾಮಿಗಳದು.** ಸೊಲ್ಲಾಪುರದಲ್ಲಿದ್ದುಕೊಂಡು ಅಲ್ಲಿನ ಅಂದಿನ

ಹೆಸರಾಂತ ವಾರದ ಮತ್ತು ಹೊಟಗಿ ಬೃಹನ್ಮಠದ ಸಂಸ್ಕೃತ ಪಾಠಶಾಲೆಯಲ್ಲಿದ್ದು ಶ್ರೀಗಳು ಓದನ್ನು ಪ್ರಾರಂಭಿಸಿದರು. ಸಂಸ್ಕೃತ ಓದು ಮೊದಲು ಕಬ್ಬಿಣದ ಕಡಲೆಯೆನಿಸಿದರೂ ಕ್ರಮೇಣ ರುಚಿಸತೊಡಗಿತು. ರುಚಿ ,ಅಭಿರುಚಿಯಾಗಿ ಮಾರ್ಪಟ್ಟಾಗ ಸಂಸ್ಕೃತ ಓದೇ ಅವರ ಉಸಿರಾಯಿತು; ಅವರ ಅವಿಭಾಜ್ಯ ಅಂಗವಾಯಿತು. ಪಾಠಶಾಲೆಯ ಶಿಕ್ಷಕರ ಪ್ರೀತ್ಯಭಿಮಾನಗಳಿಗೆ ಪಾತ್ರರಾದ ಶ್ರೀಗಳು ಸಂಸ್ಕೃತ ವ್ಯಾಕರಣ, ಸಾಹಿತ್ಯ, ಕಾವ್ಯ, ನಾಟಕಾದಿಗಳನ್ನು ಓದಿ ಅವನ್ನೆಲ್ಲ ಕರತಲಾಮಲಕ ಮಾಡಿಕೊಂಡರು.

## ಅಮರೇಶ್ವರ ಮಠದ 'ಕೀರ್ತಿಶ್ರೀ' :

ಈ ಮಧ್ಯದಲ್ಲಿ ಪೂಜ್ಯ ಶ್ರೀ ಅಮರೇಶ್ವರ ಸ್ವಾಮಿಗಳವರು ಲಿಂಗೈಕ್ಯರಾದ ನಂತರ ಕೋಟೆಕಲ್ಲ-ಗುಳೇದಗುಡ್ಡ ಹಾಗೂ ಅಮರೇಶ್ವರ ಶ್ರೀಮಠದ ಭಕ್ತಾದಿಗಳೆಲ್ಲ ಸೇರಿ ದಿನಾಂಕ : ೧-೬-೧೯೭೦ರಂದು ಹುಬ್ಬಳ್ಳಿಯ ಹನ್ನೆರಡು ಮಠದ ಶ್ರೀ ಷ. ಬ್ರ. ಮಡಿವಾಳ ಶಿವಾಚಾರ್ಯ ಸ್ವಾಮಿಗಳಿಂದ ಅಮರೇಶ್ವರ ಶ್ರೀಮಠದ ಚರ-ಸ್ಥಿರ ಪಟ್ಟಾಧಿಕಾರವನ್ನು ಇವರಿಗೆ ಕೊಡಿಸಿದರು. ಆಗ ಶ್ರೀಗಳಿಗೆ ಇನ್ನೂ ತುಂಬಾ ಚಿಕ್ಕ ವಯಸ್ಸು. ಅವರು ಇನ್ನಷ್ಟು ಮತ್ತಷ್ಟು ಓದಬೇಕು, ವಿದ್ವಾಂಸರಾಗಬೇಕು-ಎಂಬ ಉದ್ದೇಶದಿಂದ ಶ್ರೀಮಠದ ಭಕ್ತರು ಶ್ರೀಗಳನ್ನು ಕಾಶಿಗೆ ಕಳುಹಿಸಿ ಕೊಡಬೇಕೆಂದು ತೀರ್ಮಾನಿಸಿದರು. ಸೊಲ್ಲಾಪುರದ ಗುರುವರ್ಗವು ಸಹ ಶ್ರೀಗಳನ್ನು ಕಾಶಿಗೆ ಹೋಗಿ ಸಂಸ್ಕೃತ ವಿದ್ಯಾಭ್ಯಾಸವನ್ನು ಮುಂದುವರಿಸಬೇಕೆಂದು ಒತ್ತಾಯಿಸಿತು. ಭಕ್ತರ ಅಭಿಪ್ರಾಯವನ್ನು ಅನುಮೋದಿಸಿ ಸಮ್ಮತಿಸಿದ ಶ್ರೀಗಳು ಸಂಸ್ಕೃತ ಭಾಷೆಯ ಉನ್ನತ ವ್ಯಾಸಂಗಕ್ಕಾಗಿ ಕಾಶಿಗೆ ದಯಮಾಡಿಸಿದರು.

## ಬಂಗಾರದ ಬತ್ತಳಿಕೆ :

ಕಾಶಿಯ ಜಂಗಮವಾಡಿ ಮಠದಲ್ಲಿ ಆಶ್ರಯ ಪಡೆದ ಶ್ರೀಗಳು ಅಲ್ಲಿನ ವಿಶ್ವ ವಿಖ್ಯಾತ ಶ್ರೀ ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾಲಯದ ವೇದಾಂತ ವಿಭಾಗದಲ್ಲಿ ಪ್ರವೇಶ ಪಡೆದು ೧೯೭೩ ರಲ್ಲಿ ನಡೆದ ಅಲ್ಲಿನ 'ವೇದಾಂತಾಚಾರ್ಯ' ಪರೀಕ್ಷೆಯಲ್ಲಿ ಪ್ರಪ್ರಥಮ ಸ್ಥಾನವನ್ನು ತಮ್ಮದನ್ನಾಗಿಸಿಕೊಂಡರು. ವೇದಾಂತ ವಿಭಾಗದ ಎಂಟೂ ಶಾಖೆಗಳ ಎಲ್ಲ ವಿದ್ಯಾರ್ಥಿಗಳಿಗಿಂತಲೂ ಹೆಚ್ಚು ಅಂಕಗಳನ್ನು ಪಡೆದು ಪ್ರಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯಾದುದರಿಂದ ಮಾನ್ಯ ವಿಶ್ವವಿದ್ಯಾಲಯವು ಇವರಿಗೆ **'ಶ್ರೀ ಸ್ವಾಮಿ ವಿವೇಕಾನಂದ ಸುವರ್ಣಪದಕ', 'ಶ್ರೀ ಅನ್ನದಾ ಪ್ರಸಾದ ಮುಖರ್ಜಿ ಸುವರ್ಣ ಪದಕ'** ಮತ್ತು **'ಶ್ರೀ ಸಂಪೂರ್ಣಾನಂದ ಸುವರ್ಣ ಪದಕ'**ಗಳನ್ನು ನೀಡಿ ಇವರ ಪ್ರತಿಭೆ ಮತ್ತು ಪ್ರಯತ್ನಗಳನ್ನು ಸನ್ಮಾನಿಸಿತು. ಶ್ರೀಗಳು ಬಂಗಾರದ ಮನುಷ್ಯನಾಗಿ

ನಿಂತುಕೊಂಡರು. ಅವರ ಪ್ರತಿಭೆಯು ಅವರನ್ನು 'ಬಂಗಾರದ ಬತ್ತಳಿಕೆ'ಯನ್ನಾಗಿಸಿತು. ಇನ್ನೇನು ತಮ್ಮ ಕಾಶೀವಾಸಕ್ಕೆ ಮತ್ತು ಅಧ್ಯಯನಕ್ಕೆ ಪೂರ್ಣವಿರಾಮವನ್ನು ಕೊಟ್ಟು ಮರಳಿ ಮಠಕ್ಕೆ ಬರಬೇಕೆಂದು ಆಲೋಚಿಸುತ್ತಿರುವಾಗಲೇ ಲಿಂ. ಕಾಶೀ ಜಗದ್ಗುರು ಶ್ರೀ ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳವರು ಶ್ರೀಗಳವರಿಗೆ ಅಧ್ಯಯನ ಮತ್ತು ಸಂಶೋಧನೆಯನ್ನು ಮುಂದುವರಿಸಲು ಒತ್ತಾಯಿಸಿದರಷ್ಟೇ ಅಲ್ಲ, ಪರ್ಯಾಯ ರೂಪದಿಂದ ಆರ್ಥಿಕ–ಆಶ್ರಯವನ್ನು ಕೊಡಲು ಸಂಕಲ್ಪಿಸಿದರು.

## ವಿದ್ಯಾವಾರಿಧಿ :

ಪರಮಪೂಜ್ಯರ ಒತ್ತಾಯ ಮತ್ತು ಪ್ರೋತ್ಸಾಹಗಳಿಂದ ಪುಳಕಿತರಾದ ಶ್ರೀಗಳು ವೀರಶೈವ ಧರ್ಮಗ್ರಂಥವಾದ ಶ್ರೀ ಸಿದ್ಧಾಂತ ಶಿಖಾಮಣಿಯ ಮೇಲೆ ವಿಶೇಷ ಅಧ್ಯಯನವನ್ನು ಪ್ರಾರಂಭಿಸಿ ಸಂಶೋಧನಾ–ಪ್ರಬಂಧವನ್ನು ಬರೆಯತೊಡಗಿದರು. ಈ ಮಧ್ಯ ಶ್ರೀಗಳ ಪ್ರತಿಭೆ ಮತ್ತು ಪಾಂಡಿತ್ಯಗಳನ್ನು ಗುರುತಿಸಿದ ವಿಶ್ವವಿದ್ಯಾಲಯವು ಅವರಿಗೆ ವಿದ್ಯಾರ್ಥಿ–ವೇತನವನ್ನು ಕೊಡಲು ಮುಂದೆ ಬಂದಿತು. ಶ್ರೀಗಳು ತಮ್ಮ ಸ್ವಾರ್ಜಿತ ಮತ್ತು ಪ್ರತಿಭಾರ್ಜಿತ ಧನದಿಂದಲೇ ತಮ್ಮ ಅಧ್ಯಯನದ ದಿಗ್ವಿಜಯ ಯಾತ್ರೆಯನ್ನು ಮತ್ತೊಮ್ಮೆ ಪ್ರಾರಂಭಿಸಿದರು. ಶ್ರೀ ಸಿದ್ಧಾಂತ ಶಿಖಾಮಣಿಯ ಮೇಲೆ ವಿದ್ವತ್ಪೂರ್ಣ ಪ್ರಬಂಧವನ್ನು ಮಂಡಿಸಿದ ಶ್ರೀಗಳಿಗೆ ವಿಶ್ವವಿದ್ಯಾಲಯವು 'ವಿದ್ಯಾ ವಾರಿಧಿ' (ಪಿಎಚ್.ಡಿ.) ಪದವಿಯನ್ನು ಕೊಟ್ಟು ಗೌರವಿಸಿತು.

## ವಿಶ್ವವಿದ್ಯಾಲಯದ 'ಗೌರವಗುಚ್ಛ' :

ಪೂಜ್ಯರು ಪ್ರತಿಭೆಯ ಸಂಗಮವಾಗಿದ್ದರು. ಬರೀ ಪಠ್ಯ ಚಟುವಟಿಕೆಗಳಲ್ಲಷ್ಟೇ ಅಲ್ಲ, ಪಠ್ಯೇತರ ಚಟುವಟಿಕೆಗಳಲ್ಲಿಯೂ ಅವರದು ಪ್ರಧಾನ ಪಾತ್ರ. ಆಗಾಗ ತಮ್ಮ ವಿಶ್ವ ವಿದ್ಯಾಲಯ ಹಾಗೂ ಅಂತರ್ವಿಶ್ವವಿದ್ಯಾಲಯಗಳಲ್ಲಿ ನಡೆಯುವ ಚರ್ಚಾಗೋಷ್ಠಿ, ವಿದ್ವದ್‌ಗೋಷ್ಠಿ ಹಾಗೂ ಚಿಂತನಗೋಷ್ಠಿಗಳಲ್ಲಿ ಭಾಗವಹಿಸಿ ತಮ್ಮನ್ನು ಆಯ್ಕೆ ಮಾಡಿ ಕಳುಹಿಸಿದ ವಿಶ್ವವಿದ್ಯಾಲಯಕ್ಕೆ 'ಗೌರವ ಗುಚ್ಛ'ಗಳನ್ನು ತಂದುಕೊಡುತ್ತಲಿದ್ದರು. ತಮ್ಮ ಸರಳ ಸ್ವಭಾವ, ಸೌಜನ್ಯ ಹಾಗೂ ವಿದ್ಯಾಸಂಪತ್ತಿನಿಂದಾಗಿ ಶ್ರೀಗಳು ಇಡೀ ವಿಶ್ವವಿದ್ಯಾಲಯವೇ ಅವರನ್ನು ಕಂಡು ಹೆಮ್ಮೆಪಡುವಂತೆ ಮಾಡಿದ್ದರು. ಅಲ್ಲಿನ ಆಚಾರ್ಯ–ಪ್ರಾಚಾರ್ಯ ವರ್ಗವಷ್ಟೇ ಅಲ್ಲ, ಆಡಳಿತ ಸಿಬ್ಬಂದಿಯು ಕೂಡ ಶ್ರೀಗಳನ್ನು ಅಭಿಮಾನದ ಕಣ್ಣುಗಳಿಂದ ನೋಡುತ್ತಿತ್ತು.

## 'ಸರ್ವದರ್ಶನತೀರ್ಥ' ಸುವರ್ಣಪದಕವಿಜೇತ :

ಪೂಜ್ಯರು ಓದಲು ಕುಳಿತುಕೊಂಡರೆ ಸ್ಥಿತಪ್ರಜ್ಞರಾಗಿ ಬಿಡುತ್ತಿದ್ದರು. ಓದಿನಲ್ಲಿ

ಅವರಿಗೆ 'ಏಕಲವ್ಯ ನಿಷ್ಠೆ'. ದಿನದ ೨೪ ಘಂಟೆಗಳಲ್ಲಿ ೧೮ಕ್ಕೂ ಹೆಚ್ಚು ಘಂಟೆ ಓದಿದ ಕೀರ್ತಿ ಅವರದು. 'ತಾವಾಯಿತು, ತಮ್ಮ ಓದಾಯಿತು' ಅನಪೇಕ್ಷಿತ ವಿಷಯಗಳಲ್ಲಿ ಎಂದೂ ತಲೆಹಾಕುತ್ತಿರಲಿಲ್ಲ. ಅಂತಲೇ ಪದವಿ–ಪ್ರಶಸ್ತಿಗಳು ಒಂದೊಂದಾಗಿ ಸರತಿಯಲ್ಲಿ ನಿಂತುಕೊಂಡು ಅವರ 'ಪ್ರತಿಭಾ ಬತ್ತಳಿಕೆ'ಯನ್ನು ಸೇರತೊಡಗಿದವು. ಕಲ್ಕತ್ತದಲ್ಲಿ ನಡೆದ 'ಸರ್ವದರ್ಶನತೀರ್ಥ' ಪರೀಕ್ಷೆಯಲ್ಲಿ ಶ್ರೀಗಳು ಪ್ರಪ್ರಥಮ ಸ್ಥಾನವನ್ನು ಗಿಟ್ಟಿಸಿಕೊಳ್ಳುವ ಮೂಲಕ ವಂಗನಾಡಿನ ಸ್ವರ್ಣಪದಕವನ್ನು ಕೂಡ ತಮ್ಮದನ್ನಾಗಿಸಿ–ಕೊಂಡರು.

## ವೀರಶೈವರಲ್ಲೊಬ್ಬ 'ವಿದ್ಯಾವಾಚಸ್ಪತಿ' :

ಶ್ರೀಗಳು ವಿದ್ಯಾವಾರಿಧಿಗಳಾಗುತ್ತಲೇ ಅವರ ಆಚಾರ್ಯವರ್ಗ ಹಾಗೂ ಅಭಿಮಾನಿಗಳು ಸಂಶೋಧನೆಯನ್ನು ಮತ್ತೆ ಮುಂದುವರಿಸಬೇಕೆಂದು ಆಗ್ರಹಿಸಿದರು ಶ್ರೀಗಳು 'ಶಕ್ತಿ ವಿಶಿಷ್ಟಾದ್ವೈತ (ವೀರಶೈವ) ಸಮ್ಮತ ತತ್ತ್ವತ್ರಯ ವಿಮರ್ಶೆ' ಎಂಬ ವಿಷಯವನ್ನು ಆಯ್ದುಕೊಂಡು ತಮ್ಮ ಸಂಶೋಧನೆಯನ್ನು ಮುಂದುವರಿಸಿದಾಗ ದೆಹಲಿಯ ವಿಶ್ವವಿದ್ಯಾಲಯ ಅನುದಾನ ಆಯೋಗ (ಯು.ಜಿ.ಸಿ.)ವು ವಿಶೇಷ ಶಿಷ್ಯವೇತನವನ್ನು ಕೊಟ್ಟು ಅವರನ್ನು ಪ್ರೋತ್ಸಾಹಿಸಿತು. ತಮ್ಮ ಸತತ ಪರಿಶ್ರಮ ಹಾಗೂ ಅಧ್ಯಯನದ ಬಲದಿಂದ ಪೂಜ್ಯರು ಶೈಕ್ಷಣಿಕ ಜೀವನದ ಕೊನೆಯ 'ಅರ್ಹತಾ ಪತ್ರ'ವಾದ ಮತ್ತು ವಿಶೇಷಾರ್ಹತೆ ಎನಿಸಿದ 'ವಿದ್ಯಾವಾಚಸ್ಪತಿ' ಪದವಿಯನ್ನು ತಮ್ಮದನ್ನಾಗಿಸಿಕೊಂಡು ತಮ್ಮ 'ಯಶೋಗಾಥೆ'ಯ ವಿಸ್ತಾರವನ್ನು ಹೆಚ್ಚಿಸಿಕೊಂಡರು.

## ಏಕಾಂತವೀರ :

ಪೂಜ್ಯರು ಆಜನ್ಮ ಪ್ರತಿಭಾವಂತರು ಮತ್ತು ಮೇಧಾವಿಗಳು; ಅಧ್ಯಯನ ಪ್ರವೃತ್ತಿಯನ್ನು ಅಂಗಸಾತ್ ಮಾಡಿಕೊಂಡವರು. ಸತತ ಪರಿಶ್ರಮವೇ ಅವರ ತಪಸ್ಸು. ಅಂತಲೇ ದಿನೇ ದಿನೇ ಅವರ 'ಪ್ರಗತಿ ಪತ್ರ' ಶ್ರೀಮಂತವಾಗುತ್ತಲಿತ್ತು ಮತ್ತು 'ಪ್ರತಿಭಾ ಸಂಪತ್ತು' ವಿಸ್ತರಿಸಿಕೊಳ್ಳತೊಡಗಿತ್ತು. ಶ್ರೀಗಳು ಏಕಾಂತವೀರರು. ಅವರಲ್ಲಿನ ಏಕಾಗ್ರತೆ ಮತ್ತು ಏಕಾಂತನಿಷ್ಠೆಯೇ ಅವರ ವ್ಯಕ್ತಿತ್ವವನ್ನು ಶ್ರೀಮಂತಿಸಿತು. ಅದುವೇ ಅವರ ವಿದ್ಯಾರ್ಥಿ ಜೀವನವನ್ನು ಹೊನ್ನಿನ ಚೀಲ (ಚಿನ್ನದ ಚೀಲ)ವನ್ನಾಗಿಸಿತು. ಅವರು ಶೈಕ್ಷಣಿಕ ಜೀವನದ ಒಂದೊಂದೇ 'ಮೈಲುಗಲ್ಲು'ಗಳನ್ನು ಯಶಸ್ವಿಯಾಗಿ ಕ್ರಮಿಸಿದರು ಮತ್ತು ತಮ್ಮ ವಿದ್ಯಾರ್ಥಿ ಜೀವನವನ್ನು ಇತಿಹಾಸದಲ್ಲಿ ದಾಖಲಿಸಿದರು.

## ಜ್ಞಾನ ಮಂದಿರವೇ ಕೈಗೆ :

ಶ್ರೀಗಳು ವಿದ್ಯಾಪ್ರೇಮಿಗಳಷ್ಟೇ ಅಲ್ಲ, ವಿದ್ಯಾರ್ಥಿ–ಪ್ರೇಮಿಗಳು ಸಹ

ಅಹುದೆಂದು ಎಷ್ಟೋ ಜನಗಳ ಅನುಭವವೇ ಅವರಿಗೆ ಈ ಪ್ರಶಸ್ತಿಯನ್ನು ಕೊಟ್ಟಿದೆ. ತಾವು ವಿದ್ಯಾರ್ಥಿಗಳಾಗಿದ್ದಾಗಿನಿಂದಲೂ ಪೂಜ್ಯರು ತಮ್ಮೆಲ್ಲ ಕಿರಿಯ ಮಿತ್ರ ವಿದ್ಯಾರ್ಥಿಗಳಿಗೆ ಓದಿಸುತ್ತಲೇ ಬಂದಿದ್ದಾರೆ. ಜಂಗಮವಾಡಿಮಠದಲ್ಲಿರುವ ವಿದ್ಯಾರ್ಥಿಗಳಿಗೆಲ್ಲರಿಗೂ ಅವರು ಮಾರ್ಗದರ್ಶಕರೂ ಹೌದು, ಅಧ್ಯಾಪಕರೂ ಹೌದು. ತಮ್ಮ ವಿದ್ಯೆ ಹಾಗೂ ಹದುಳ ಸ್ವಭಾವಗಳಿಂದಾಗಿ ಅವರು ತಮಗೆ ಆಶ್ರಯ ಕೊಟ್ಟ ಜಂಗಮವಾಡಿಮಠದ ಒಳ-ಹೊರಗೆಲ್ಲ ಅತ್ಯಂತ ಪ್ರಭಾವಿಯಾಗಿದ್ದರು. ಪೂಜ್ಯರ ಅಧ್ಯಯನಶೀಲ ಪ್ರವೃತ್ತಿಯನ್ನು ಮೆಚ್ಚಿಕೊಂಡ ಜಗದ್ಗುರುಗಳು ಶ್ರೀಮಠದ 'ಜ್ಞಾನಮಂದಿರ'ವನ್ನೇ ಅವರ ಕೈಗೆ ಕೊಟ್ಟಿದ್ದರು. ಶ್ರೀಗಳು ವಿಶ್ವಾರಾಧ್ಯ ಗುರುಕುಲದ ವಿದ್ಯಾರ್ಥಿಗಳ ಮತ್ತು ಶ್ರೀಮಠದ ಆಡಳಿತ ಸಿಬ್ಬಂದಿಯ ಗೌರವಕ್ಕೆ ಪಾತ್ರರಾಗಿದ್ದರು. ಶ್ರೀಮಠದ ಯಾವುದೇ ಕಾರ್ಯಕಲಾಪದಲ್ಲಿಯೂ ಅವರು ಹಿಂದೇಟು ಹಾಕುತ್ತಿರಲಿಲ್ಲ. ತಾವೇ ಮುಂಚೂಣಿಯಲ್ಲಿ ನಿಂತುಕೊಂಡು ಎಲ್ಲರನ್ನೂ ಹುರಿದುಂಬಿಸುತ್ತಿದ್ದರು.

## ಜನ-ಮನವೇ ಮನೆ :

ಪೂಜ್ಯ ಶ್ರೀಗಳವರು ತಾವು ವಿದ್ಯಾರ್ಜನೆ ಮಾಡುತ್ತಿರುವಾಗಲೇ ಕರ್ನಾಟಕ ಹಾಗೂ ಮಹಾರಾಷ್ಟ್ರಗಳೆರಡರಲ್ಲೂ ತುಂಬಾ ಹೆಸರುಮಾಡಿದ್ದರು. ಅವರ ಪ್ರವಚನಗಳು ಜನರ ಮನಸೂರೆಗೊಂಡಿದ್ದವು. ಅವರ ಅನುಭವಪೂರ್ಣ ವಿದ್ವತ್ ಪ್ರವಚನಗಳನ್ನು ಕೇಳಲು ಜನರು ಲಾಲಾಯಿತರಾಗುತ್ತಿದ್ದರು. ಅವರ ಲೆಕ್ಕಣಿಕೆಯು ಕೂಡ ಧಾರಾಳವಾಗಿ ಸಾಹಿತ್ಯ-ಕೃಷಿಯನ್ನು ಮಾಡುತ್ತಲಿದ್ದು ಅವರು ಬರೆದ ಗ್ರಂಥಗಳು ಸಾಹಿತ್ಯ-ಲೋಕದಲ್ಲಿ ಹೆಸರುಮಾಡಿದವು. ಪೂಜ್ಯರಿಂದಾಗಿ ಅಮರೇಶ್ವರ ಶ್ರೀಮಠದ ಕೀರ್ತಿಯು ನಾಡಿನಾದ್ಯಂತ ತುಂಬಿಕೊಂಡಿತು. ಅನೇಕ ಗ್ರಾಮ-ನಗರ-ಮಹಾನಗರಗಳು ಅವರ ನುಡಿ-ಸೇವೆಯಿಂದ ಧನ್ಯವಾದವು. ಅವರ ಪ್ರವಚನಗಳು ಪುಸ್ತಕಗಳಾಗಿ ಪ್ರಕಟಗೊಳ್ಳತೊಡಗಿದವು. ಅವುಗಳು ಜನ-ಮನದಲ್ಲಿ ಮನೆಮಾಡತೊಡಗಿದವು. ವಿಶ್ವವಿದ್ಯಾಲಯದ ತಮ್ಮ ಬಿಡುವಿನ ದಿನಗಳಲ್ಲಿ ಕಾಶಿಯಿಂದ ಕರ್ನಾಟಕ ಮತ್ತು ಮಹಾರಾಷ್ಟ್ರಗಳಿಗೆ ಬಂದ ಶ್ರೀಗಳವರಿಗೆ ಒಂದು ದಿನವು ಸಹ ಬಿಡುವಿಲ್ಲದಷ್ಟು ಎಡೆಬಿಡದ ಕಾರ್ಯಕ್ರಮಗಳು. ಪೂಜ್ಯರು ತಮ್ಮ ಬೋಧ-ಸೇವೆ ಮತ್ತು ಬರಹಗಳಿಂದಾಗಿ ಕರ್ನಾಟಕ ಮಹಾರಾಷ್ಟ್ರಗಳ ತುಂಬೆಲ್ಲ ಜನಪ್ರಿಯರಾಗಿದ್ದರು.

## ಮತ್ತೆ ಯಾರು? :

ಪೂಜ್ಯರ ವ್ಯಕ್ತಿತ್ವವನ್ನು ಸಮಗ್ರವಾಗಿ ಅಭ್ಯಸಿಸಿದ ಮತ್ತು ಅವರಲ್ಲಿನ ವಿದ್ವತ್ ಹಾಗೂ ಗುಣಸಂಪತ್ತಿಗೆ ಮಾರು ಹೋದ ಲಿಂ. ಕಾಶಿ ಜಗದ್ಗುರುಗಳ ಮಾನಸವು ಅವರನ್ನೇ ತಮ್ಮ 'ಉತ್ತರಾಧಿಕಾರಿ'ಯೆಂದು ಒಪ್ಪಿಕೊಂಡಿತ್ತು. ಶ್ರೀಗಳ ಅರಳುತ್ತಿರುವ

ಮತ್ತು ದಿನೇ ದಿನೇ ಬೆಳೆಯುತ್ತಿರುವ ವ್ಯಕ್ತಿತ್ವವನ್ನು ಕಂಡು ಅವರು ಒಳಗೊಳಗೇ ಖುಷಿ ಪಡುತ್ತಲಿದ್ದರು. ಲಿಂ. ಸನ್ನಿಧಿಯವರು ಎಲ್ಲಿಯೇ ಹೋಗಲಿ ಪೂಜ್ಯರ ಕುರಿತು ಅಭಿಮಾನದಿಂದ ಮಾತನಾಡುತ್ತಿದ್ದರು. ಸನ್ನಿಧಿಯವರು ದೇಹ ಬಿಡುವ ಮೊದಲು ಅವರನ್ನು 'ತಮ್ಮ ನಂತರ ಯಾರು?' ಎಂದು ಯಾರಾದರೂ ಭಕ್ತರು ಕೇಳಿದರೆ 'ಅವರನ್ನು ಬಿಟ್ಟು ಇನ್ನಾರು ?' ಎಂದು ಅವರು ಶ್ರೀಗಳ ಹೆಸರನ್ನು ಸೂಚಿಸುತ್ತಿದ್ದರು. ಲಿಂ. ಜಗದ್ಗುರುಗಳ ಈ ಅಭಿಪ್ರಾಯವನ್ನು ಜನ–ಮಾನಸವು ಕೂಡ ತುಂಬು ಹೃದಯದಿಂದ ಅನುಮೋದಿಸುತ್ತಿತ್ತು. ಎಲ್ಲರ ಜೊತೆ, ಎಲ್ಲ ಸಂಪ್ರದಾಯಗಳ ಜೊತೆ, ಎಲ್ಲ ಕೋಮಿನವರ ಜೊತೆ ಬೆರೆತುಕೊಂಡು ಹೋಗುವ ಶ್ರೀಗಳು ಲಿಂ. ಸನ್ನಿಧಿಯವರ ಎಲ್ಲ ಆಶಯಗಳಿಗೂ ಆಕಾರಕೊಡುವ ಭರವಸೆಯ ಬೇರಾಗಿದ್ದರು. ಅಂತಲೇ ಲಿಂ. ಕಾಶೀ ಜಗದ್ಗುರುಗಳು ದಿನಾಂಕ ೩ ೨–೧೦–೧೯೮೯ರಲ್ಲಿ ಲಿಂಗೈಕ್ಯರಾದ ನಂತರ ಕರ್ನಾಟಕ ಮಹಾರಾಷ್ಟ್ರಗಳ ಎಲ್ಲ ಶಿವಾಚಾರ್ಯರು ಮತ್ತು ಭಕ್ತಜನತೆಯು ಶ್ರೀಗಳಿಗೆ 'ಜ್ಞಾನಸಿಂಹಾಸನ'ವನ್ನು ಆರೋಹಣ ಮಾಡಲು ಆಗ್ರಹಿಸಿತು.

## ಜ್ಞಾನ–ಸಿಂಹಾಸನಾರೋಹಣ ೩

ಲಿಂ. ಕಾಶಿ ಜಗದ್ಗುರುಗಳ ಅಂತಿಮ ಇಚ್ಛೆಯ ಮೇರೆಗೆ ಮತ್ತು ಅಪಾರ ಜನಮಾನಸದ ಅಪೇಕ್ಷೆ–ಆಶಯಗಳಂತೆ ಪೂಜ್ಯರು ದಿನಾಂಕ ೩ ೧೭–೧೧–೧೯೮೯ ರಂದು ಕಾಶೀ ಜ್ಞಾನ ಸಿಂಹಾಸನದ ಆರೋಹಣ ಮಾಡಿದರು. ಈ ಸಂದರ್ಭದಲ್ಲಿ ವೀರಶೈವರ ಉಳಿದ ನಾಲ್ಕು ಪೀಠಗಳ ಪೀಠಾಚಾರ್ಯರು ಕಾಶಿಗೆ ದಯಮಾಡಿಸಿ ತಮ್ಮ ದಿವ್ಯ ಸಾನ್ನಿಧ್ಯವನ್ನಿತ್ತು ಪೂಜ್ಯರ 'ಜಗದ್ಗುರು ಪಟ್ಟಾಭಿಷೇಕ' ಕಾರ್ಯಕ್ರಮವನ್ನು ಅತ್ಯಂತ ಅದ್ದೂರಿಯಿಂದ ನೆರವೇರಿಸಿಕೊಟ್ಟರು. ಅದುವರೆಗೆ ಶ್ರೀ ಷ.ಬ್ರ.ಡಾ. ಚಂದ್ರಶೇಖರ ಶಿವಾಚಾರ್ಯರೆಂದು ಖ್ಯಾತನಾಮರಾಗಿದ್ದ ಶ್ರೀಗಳನ್ನು ಅಂದು ಜನತೆ **ಕಾಶೀ ಜ್ಞಾನಸಿಂಹಾಸನಾಧೀಶ್ವರ ಶ್ರೀ ೧೦೦೮ ಜ. ಡಾ. ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳೆಂದು** ಆನಂದದಿಂದ ಉಗ್ಘಡಿಸಿ ಹರ್ಷಿಸಿತು.

## ಮಿಂಚಿನ ಸಂಚಾರ ೩

ಕಾಶೀ ಜಂಗಮವಾಡಿಮಠದ ಹೊಸಬೆಳಕಾಗಿ ಜ್ಞಾನಗದ್ದುಗೆಯ 'ಉತ್ತರ ದಾಯಿತ್ವ'ವನ್ನು ವಹಿಸಿಕೊಂಡಾದ ಮೇಲೆ ಜಗದ್ಗುರುಗಳು ಧರ್ಮ–ಜಾಗೃತಿಗಾಗಿ ಕರ್ನಾಟಕ, ಮಹಾರಾಷ್ಟ್ರ, ಆಂಧ್ರಪ್ರದೇಶ, ಮಧ್ಯ ಪ್ರದೇಶ ಮತ್ತು ಉತ್ತರ ಪ್ರದೇಶಗಳ ತುಂಬೆಲ್ಲ ಮಿಂಚಿನಂತೆ ಸಂಚರಿಸಿದ್ದಾರೆ. ಅವರು ಹೋದೆಡೆಗಳಲ್ಲೆಲ್ಲ ಅವರಿಗೆ ಜನ ಎಲ್ಲಿಲ್ಲದ ಮತ್ತು ಎಲ್ಲೆ ಇಲ್ಲದ ಭಕ್ತಿ–ಪ್ರೇಮಗಳನ್ನು ಕೊಟ್ಟಿದ್ದಾರೆ. ವೀರಶೈವ ಸಮಾಜದ ಜೊತೆ ಜೊತೆಯಲ್ಲಿ ಇತರ ಸಮಾಜಗಳು ಕೂಡ ಅವರನ್ನು ಹೆಮ್ಮೆಯಿಂದ ಮತ್ತು

ಅಭಿಮಾನದಿಂದ ಕಂಡಿವೆ. ವರ್ಷದ ತುಂಬೆಲ್ಲ ಇರುವ ಬಿಡುವಿಲ್ಲದ ಕಾರ್ಯಕ್ರಮಗಳಿಂದ ಅವರಿಗೆ ಬಿಡುಗಡೆಯೇ ಇಲ್ಲದಂತಾಗಿದೆ. ಮೊದಲೇ ಜನಪ್ರಿಯವಾಗಿದ್ದ ಅವರ ವ್ಯಕ್ತಿತ್ವವು ಇನ್ನಷ್ಟು ಮತ್ತಷ್ಟು ಜನಪ್ರಿಯವಾಗಿ ಜನರನ್ನು ಆಕರ್ಷಿಸತೊಡಗಿದೆ.

## ಗತಿ–ಪ್ರಗತಿಗೆ ನಾಂದಿ :

ಪರಮಪೂಜ್ಯ ಸನ್ನಿಧಿಯವರು ತಮ್ಮ ಜನಪ್ರಿಯ ವ್ಯಕ್ತಿತ್ವವನ್ನು ಜನತೆಯ ಹಿತಕ್ಕಾಗಿ ಮತ್ತು ವೀರಶೈವ ಸಮಾಜದ ಕಲ್ಯಾಣಕ್ಕಾಗಿ ಧಾರಾಳವಾಗಿ ದುಡಿಸುತ್ತಲಿದ್ದಾರೆ. ಅವರಿಂದಾಗಿ ವೀರಶೈವ ಸಮಾಜದ ಘನತೆ–ಗೌರವಗಳು ಮತ್ತು ಜಂಗಮವಾಡಿ ಮಠದ ಕೀರ್ತಿಯು ಇತೋಽಪ್ಯತಿಶಯವಾಗಿ ಬೆಳೆದು ನಿಂತುಕೊಂಡಿದೆ. ಸನ್ನಿಧಿಯವರು ಶ್ರೀಪೀಠದ ಹಾಗೂ ವೀರಶೈವ ಸಮಾಜದ ಗತಿ–ಪ್ರಗತಿಗಾಗಿ ಹಮ್ಮಿಕೊಂಡ ಹತ್ತು ಹಲವು ಯೋಜನೆಗಳು ಈಗಾಗಲೇ ಕಾರ್ಯರೂಪಕ್ಕೆ ಬಂದಿದ್ದು ಆ ಯೋಜನೆಗಳ ಪ್ರಯೋಜನವನ್ನು ಸಮಾಜ ಮತ್ತು ಜನ ತುಂಬು ಉತ್ಸಾಹದಿಂದ ಪಡೆಯುತ್ತಲಿದೆ.

ಕಾರ್ಯಾಚರಣೆಯಲ್ಲಿರುವ ಅವರ ಕೆಲ ಯೋಜನೆಗಳು ಈ ಕೆಳಗಿನಂತಿವೆ–

## ಶ್ರೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ನಿತ್ಯಾನ್ನ–ದಾಸೋಹ :

ಈ ಯೋಜನೆಯ ಅಡಿಯಲ್ಲಿ ಶ್ರೀಪೀಠಕ್ಕೆ ಆಗಮಿಸಿದ ಎಲ್ಲ ಅತಿಥಿ–ಅಭ್ಯಾಗತರಿಗೆ ಮತ್ತು ಯಾತ್ರಾರ್ಥಿಗಳಿಗೆ ವ್ಯವಸ್ಥಿತವಾಗಿ ವ್ಯವಸ್ಥಿತವಾದ ಪ್ರಸಾದವು ದೊರೆಯುತ್ತದೆ. ಸನ್ನಿಧಿಯವರಿಂದಾಗಿ ಈ ನಿತ್ಯಾನ್ನ–ದಾಸೋಹ ನಿಧಿಯು ದಿನೇ ದಿನೇ ಸಮೃದ್ಧವಾಗಿ ಬೆಳೆದು ಶ್ರೀಪೀಠಕ್ಕೆ ಬಂದ ಜನ 'ಅನ್ನ ಬ್ರಹ್ಮ'ನನ್ನು ಉಂಡು ಸಂತೋಷಿಸುತ್ತಲಿದ್ದಾರೆ.

## ಶ್ರೀ ಜಗದ್ಗುರು ವಿಶ್ವಾರಾಧ್ಯ ಜನಕಲ್ಯಾಣ ಪ್ರತಿಷ್ಠಾನ :

ಜನಕಲ್ಯಾಣ ಹಾಗೂ ಮಾನವರ ಸರ್ವಾಂಗೀಣ ಪ್ರಗತಿಗಾಗಿ ಈ ವಿಶ್ವಸ್ಥ ಪ್ರತಿಷ್ಠಾನವನ್ನು ಸ್ಥಾಪಿಸಿದ್ದು ಇದು ಈಗಾಗಲೇ ಸರಕಾರಿ ಕಛೇರಿಗಳಲ್ಲಿ ನೋಂದಾಯಿಸಲ್ಪಟ್ಟಿದ್ದು ಚುರುಕಾಗಿ ಕೆಲಸವನ್ನು ಮಾಡುತ್ತಲಿದೆ.

ಈ ಪ್ರತಿಷ್ಠಾನದ ಉದ್ದೇಶ ಹಾಗೂ ಕಾರ್ಯಕಲಾಪಗಳು ಈ ಕೆಳಗಿನಂತಿವೆ–

೧. ಶೈವಾಗಮಗಳನ್ನು ವಿಭಿನ್ನ ಭಾಷೆಗಳಲ್ಲಿ ಪ್ರಕಾಶಪಡಿಸುವುದು.

೨. ಪ್ರಾಚೀನ ಹಸ್ತಲಿಪಿಗಳ ಶೋಧ ಮತ್ತು ಅವುಗಳ ಸಂಗ್ರಹ–ಸಂರಕ್ಷಣೆ ಮತ್ತು ಪ್ರಕಾಶನ.

೩. ಶಿಕ್ಷಣ ಸಂಸ್ಥೆ, ವಿದ್ಯಾರ್ಥಿ ನಿಲಯ ಮತ್ತು ಗ್ರಂಥಾಲಯಗಳನ್ನು ನಡೆಸುವುದು.

೪. ವೃದ್ಧಾಶ್ರಮ ಮತ್ತು ಅನಾಥಾಶ್ರಮಗಳನ್ನು ಸಂಚಾರಿ ರೂಪದಲ್ಲಿ ನಡೆಸುವುದು.

೫. ಬುದ್ಧಿವಂತ ಬಡ ವಿದ್ಯಾರ್ಥಿಗಳಿಗೆ ಧನ ಸಹಾಯವನ್ನೊದಗಿಸಿ ಪ್ರೋತ್ಸಾಹಿಸುವುದು.

೬. ಧಾರ್ಮಿಕ, ಆಧ್ಯಾತ್ಮಿಕ, ಗ್ರಂಥಗಳನ್ನು ಬೇರೆ ಬೇರೆ ಭಾಷೆಗಳಲ್ಲಿ ಪ್ರಕಾಶಪಡಿಸುವುದು.

೭. ಔದ್ಯೋಗಿಕ ವ ಯೌಗಿಕ ಸಂಸ್ಥೆಗಳ ಸಂಚಾಲನ........ಇತ್ಯಾದಿ.

## ‘ವಿಭೂತಿ’ ತ್ರೈಮಾಸಿಕ ಪತ್ರಿಕೆ :

ಈ ಮೊದಲು ಶ್ರೀಪೀಠದ ೮೪ನೆಯ ಪೀಠಾಚಾರ್ಯರಾದ ಲಿಂ. ಜ. ವೀರಭದ್ರ ಶಿವಾಚಾರ್ಯ ಮಹಾಸ್ವಾಮಿಗಳಿಂದ ತೆಲಗು ಭಾಷೆಯಲ್ಲಿ ಪ್ರಾರಂಭಿಸಲ್ಪಟ್ಟಿದ್ದ ಈ ಪತ್ರಿಕೆಗೆ ಸನ್ನಿಧಿಯವರು ಮತ್ತೆ ಪುನರ್ಜನ್ಮವನ್ನು ಕೊಟ್ಟಿದ್ದಾರೆ. ಈ ತ್ರೈಮಾಸಿಕ ಪತ್ರಿಕೆಯು ಈಗ ಮರಾಠಿ ಭಾಷೆಯಲ್ಲಿ ಹೊರಬರುತ್ತಲಿದ್ದು ಈಗಾಗಲೇ ಮಹಾರಾಷ್ಟ್ರದ ಮನೆ ಮನೆಗಳನ್ನು ತಲುಪಿ ಜನ–ಮಾನಸವನ್ನು ಬೌದ್ಧಿಕವಾಗಿ ಮತ್ತು ಆಧ್ಯಾತ್ಮಿಕವಾಗಿ ಶ್ರೀಮಂತಿಸುತ್ತಲಿದೆ.

## ಸಾಹಿತ್ಯ ಕೃಷಿ :

ಮಹಾರಾಷ್ಟ್ರದಲ್ಲಿ ಬಹುಸಂಖ್ಯೆಯಲ್ಲಿ ವೀರಶೈವರಿದ್ದು ಅವರಿಗೆ ಓದಲು ವೀರಶೈವ ಸಾಹಿತ್ಯವೇ ಉಪಲಬ್ಧವಾಗುತ್ತಿಲ್ಲ. ಇದನ್ನರಿತ ಜಗದ್ಗುರುಗಳು ಶ್ರೀ ಸಿದ್ಧಾಂತ ಶಿಖಾಮಣಿಯನ್ನು ಇಡಿಯಾಗಿ ಮರಾಠಿಗೆ ಅನುವಾದಿಸಿ ಆ ಜನಗಳ ಕೈಗೆ ಕೊಟ್ಟಿದ್ದಾರೆ. ಅದಲ್ಲದೆ ಶ್ರೀ ಸಿದ್ಧಾಂತ ಶಿಖಾಮಣಿಯ ಮೇಲಿನ ಚಿಕ್ಕ ಪುಟ್ಟ ಪ್ರವಚನ–ಗ್ರಂಥಗಳು ಕೂಡ ಹೊರಬಂದಿವೆ. ಜನ್ಮ ಹಾ ಅಖೇರಚಾ.... ಭಾಗ ೧, ಭಾಗ ೨.......ಇವೇ ಮೊದಲಾದವುಗಳು ಅವುಗಳಲ್ಲಿನ ಕೆಲವು ಪ್ರಮುಖವಾದವುಗಳು.

## ಜಂಗಮವಾಡಿ ಮಠಕ್ಕೆ ಕಾಯಕಲ್ಪ :

ಸನ್ನಿಧಿಯವರ ಆದೇಶದಂತೆ ಮಠದ ಪ್ರಾಚೀನ ಜೀರ್ಣ–ಶೀರ್ಣ ಭಾಗಗಳೆಲ್ಲ ಮತ್ತೆ ನವೀಕರಿಸಲ್ಪಟ್ಟಿದ್ದು ಶ್ರೀಮಠವು ತನ್ನಲ್ಲಿನ ಅನಾನುಕೂಲತೆಗಳನ್ನೆಲ್ಲ ದೂರ ಮಾಡಿ ಅನುಕೂಲತೆಗಳನ್ನು ಹೆಚ್ಚಿಸಿಕೊಂಡಿದೆ. ವಿಶ್ವಾರಾಧ್ಯ ಗುರುಕುಲದಲ್ಲಿ ಓದುತ್ತಿರುವ ವಿದ್ಯಾರ್ಥಿಗಳ ವಸತಿ–ಗೃಹ ಹಾಗೂ ಊಟದ ವ್ಯವಸ್ಥೆಯಲ್ಲಿ ಗಣನೀಯ ಮತ್ತು ಗಮನೀಯ ಮಾರ್ಪಾಡಾಗಿದೆ. ಶ್ರೀಮಠದ ಶೈವ ಭಾರತಿ ಪ್ರಕಾಶನ ಸಂಸ್ಥೆಯಿಂದ ಅನೇಕ ಚಿಕ್ಕಪುಟ್ಟಗ್ರಂಥಗಳು ಪ್ರಕಾಶಿತಗೊಂಡಿದ್ದು ತಮ್ಮ ಬಹುದಿನಗಳ ಬಿಡುಗಡೆಯ

ತನಸನ್ನು ನನಸಾಗಿಸಿಕೊಂಡಿವೆ.

## ಯೋಜನಾ–ಪಾತ್ರ :

ಸನ್ನಿಧಿಯವರ ಅಕ್ಷಯ 'ಯೋಜನಾ ಬತ್ತಳಿಕೆ'ಯಲ್ಲಿ ಇನ್ನೂ ಹತ್ತು ಹಲವಾರು ಯೋಜನೆಗಳಿವೆ.

೧) ವಿದ್ವತ್ ಸನ್ಮಾನ ೨) ಧಾರ್ಮಿಕ ಮಾರಾಟ ಮಾಳಿಗೆಗಳು : ಇವುಗಳಲ್ಲಿ ಭಕ್ತ ಜನಗಳಿಗೆ ವಿಭೂತಿ, ರುದ್ರಾಕ್ಷಿ, ಶಿವಪೂಜಾ ವಿಧಿ–ವಿಧಾನ ಪುಸ್ತಕಗಳು, ಧಾರ್ಮಿಕ ಸಾಮಗ್ರಿಗಳು ಯೋಗ್ಯ ಬೆಲೆಯಲ್ಲಿ ಉಪಲಬ್ಧವಾಗುವಂತೆ ಮಾಡುವುದು.

೩) ಶಿವಾಚಾರ್ಯ ಸಮ್ಮೇಳನಗಳನ್ನು ಕರೆಯುವ ಮೂಲಕ ಅವುಗಳಲ್ಲಿ ಧಾರ್ಮಿಕ ವಿಚಾರಗಳ ಆದಾನ–ಪ್ರದಾನ ಮಾಡಿಕೊಳ್ಳುವುದು. ೪) ಶಿವಾಚಾರ್ಯರಿಂದ ಅಲ್ಲಲ್ಲಿ 'ಜ್ಞಾನದಾಸೋಹ'ಗಳನ್ನು ಏರ್ಪಡಿಸಿ ಜನರಲ್ಲಿ ಭಕ್ತಿ ಮತ್ತು ಪ್ರಜ್ಞೆಗಳನ್ನು ತುಂಬುವದು. ೫) ಬೋಧಕೃಷಿ, ಶೋಧಕೃಷಿ, ಸಾಹಿತ್ಯಕೃಷಿಯನ್ನು ಪ್ರೋತ್ಸಾಹಿಸುವುದು...... ಮುಂತಾದವುಗಳು. ಈಗಾಗಲೇ ಈ ಎಲ್ಲ ಯೋಜನೆಗಳು ಪ್ರಾಯೋಗಿಕವಾಗಿ ನಡೆದಿದ್ದು ಯಶಸ್ಸು ಕಂಡಿವೆ. ಅವುಗಳನ್ನು ಇನ್ನಷ್ಟು ಮತ್ತಷ್ಟು ಚೈತನ್ಯಮಯ ವಾಗಿಸಬೇಕೆಂಬ ಪ್ರಬಲ ಸಂಕಲ್ಪ ಸನ್ನಿಧಿಯವರದಾಗಿದೆ.

## ಸಾಧನೆಯ ಸುತ್ತಮುತ್ತ...... :

ಪೂಜ್ಯ ಸನ್ನಿಧಿಯವರು ಚತುರ್ಭಾಷಾಪಂಡಿತರಾಗಿದ್ದು ಕನ್ನಡ, ಹಿಂದೀ, ಸಂಸ್ಕೃತ ಮತ್ತು ಮರಾಠಿ ಭಾಷೆಗಳಲ್ಲಿ ಧಾರಾಕಾರವಾಗಿ ಮಾತನಾಡುತ್ತಾರೆ. ಎಂಥ ಗಜ–ದಿಗ್ಗಜ ಪಂಡಿತರು ಕೂಡ ಅವರ ಮಾತುಗಳಿಗೆ ಮಾರು ಹೋಗಿ ಮನಸೋಲುತ್ತಾರೆ. ಭಾರತದ ರಾಜಧಾನಿಯಾದ ದಿಲ್ಲಿಯನ್ನು ಮೊದಲು ಮಾಡಿಕೊಂಡು ದೇಶದ ಪ್ರತಿಷ್ಠಿತ ನಗರಗಳಲ್ಲೆಲ್ಲ ಅವರು ಜ್ಞಾನದಾಸೋಹವನ್ನು ನೀಡಿದ್ದಾರೆ. ಸನ್ನಿಧಿಯವರ ಲೆಕ್ಕಣಿಕೆಯು ಕೂಡ ಸಶಕ್ತವಾಗಿದೆ. ಅವರು ಕನ್ನಡದಲ್ಲಿ ಬರೆದ ಶ್ರೀ ಸಿದ್ಧಾಂತ ಶಿಖಾಮಣಿಯ ಮೇಲಣ ಪ್ರವಚನ–ಕಿರಣಗಳು ಕರ್ನಾಟಕದ ತುಂಬೆಲ್ಲ ಹೆಸರು ಮಾಡಿವೆ. ಪೂಜ್ಯ ಸನ್ನಿಧಾನಕ್ಕೆ ಶ್ರೀ ಸಿದ್ಧಾಂತ ಶಿಖಾಮಣಿಯ ಕುರಿತು ವಿಶೇಷ ಗೌರವವಿದೆ. ಅವರ ಸಾಧನೆ ಮತ್ತು ಸಂಶೋಧನೆಗಳ ಕೇಂದ್ರಬಿಂದು ಶ್ರೀ ಸಿದ್ಧಾಂತ ಶಿಖಾಮಣಿ. ಸನ್ನಿಧಿಯವರು ನಿರಂತರವಾಗಿ ಮತ್ತು ನಿರ್ಮಲವಾಗಿ ಹರಿಯುವ ಪಾರದರ್ಶಕ ನದಿಯಂತೆ. ಸರಳತೆ ಮತ್ತು ಸತತ ಪರಿಶ್ರಮಗಳೇ ಅವರ ಯಶಸ್ವೀ ಜೀವನದ ಯಶಸ್ಸಿನ ಗುಟ್ಟು

**ತುಂಬಿದ ಕೊಡ :**

ಸನ್ನಿಧಿಯವರೊಂದು ತುಂಬಿದ ಕೊಡ. ವಿದ್ವತ್ತು ಮತ್ತು ವರ್ಚಸ್ಸುಗಳೆರಡೂ ಅವರಲ್ಲಿ ಶಾಶ್ವತವಾಗಿ ಬೀಡು ಬಿಟ್ಟಿವೆ. ಆವೇಶ ಮತ್ತು ಆಕ್ರೋಶ ಅವರಲ್ಲಿಲ್ಲವೇ ಇಲ್ಲ. ಅವರು ಶಾಂತಿ ಮತ್ತು ಸಮಾಧಾನಗಳ ತವರುಮನೆಯಂತಿದ್ದಾರೆ. ವ್ಯಸನಾಧೀನ ಹಾಗೂ ಭ್ರಮಾಧೀನವಾದ ಇಂದಿನ ಆಧುನಿಕ ಸಮಾಜವನ್ನು ಕಂಡು ಅವರು ತುಂಬಾ ಕನಿಕರ ಪಡುತ್ತಾರೆ ಮತ್ತು ಆ ಕುರಿತು ಕಾಳಜಿ ತೋರುತ್ತಾರೆ. ಸನ್ನಿಧಿಯವರದು ಸರ್ವಾಂಗ ಸುಂದರ ವ್ಯಕ್ತಿತ್ವ. ಅವರ ವ್ಯಕ್ತಿತ್ವದ ಪ್ರಯೋಜನ ಪಡೆದು ವೀರಶೈವ ಸಮಾಜ ಮತ್ತು ಮನುಕುಲ 'ಕೃತಕೃತ್ಯತೆ'ಯ ಭಾವದಿಂದ ತನ್ನ ಕುರಿತು ತಾನೇ ಹೆಮ್ಮೆಪಟ್ಟುಕೊಳ್ಳುತ್ತಲಿದೆ ಎಂಬ ನಮ್ಮ ಮಾತು ದಿಟಪುಟವಾದದ್ದು ಎಂಬುವುದರಲ್ಲಿ ಎರಡು ಮಾತಿಲ್ಲವೆಂಬುದು ನಮಗಷ್ಟೇ ಏಕೆ ? ಇಡೀ ವೀರಶೈವ ಸಮಾಜಕ್ಕೆ ಮತ್ತು ಸಮಸ್ತ ಕನ್ನಡ ನಾಡ-ಜನತೆಗೆಲ್ಲ ಗೊತ್ತಿರುವ ವಿಷಯವೇ ಸರಿ.

## ಶ್ರೀ ರಂಭಾಪುರೀಶ್ವರ ಸಂದೇಶ



ನೀತಿಯಿಲ್ಲದ ಶಿಕ್ಷಣ, ಭೀತಿಯಿಲ್ಲದ ಶಾಸನ, ಮಿತಿಯಿಲ್ಲದ ಜೀವನ
ಸೀಮಾತೀತವಾದ ಸ್ವಾತಂತ್ರ್ಯ ಇವು ರಾಷ್ಟ್ರ ವಿಘಾತಕಗಳು

ಅಧರ್ಮದ ಮೇಲೆ ಧರ್ಮದ ದಂಡೆಯಾತ್ರೆ ನಡೆಯಲಿ !

ರಾಜಕೀಯ ಸಬಲ ಸಂಘರ್ಷದಲ್ಲಿ ಎಂದೂ ಎಲ್ಲಿಯೂ ಧರ್ಮ ಕೊಲೆಯಾಗದಿರಲಿ.

ನಾಡು ಧರ್ಮ ಸಾಮ್ರಾಜ್ಯವಾಗಲಿ ! ಭಕ್ತಿಯ ನೆಲೆಬೀಡಾಗಲಿ !

ಶಾಸ್ತ್ರ ನಿಷ್ಠೆ, ಗುರುದೇವತಾ ಭಕ್ತಿ, ಸತ್ಕರ್ಮಾನುಷ್ಠಾನ, ವಿಜ್ಞಾನ ನಾಗರೀಕತೆ ಇವು
ಜೀವಾತ್ಮನಿಗೆ ಆರಲಾರದ ದಾರಿ ದೀಪಗಳು



ಜೀವನದಲ್ಲೊಂದು ಗುರಿ ಇರಲಿ, ಆ ಗುರಿ ತಲುಪಿಸಲು ಗುರುವೊಬ್ಬನಿರಲಿ

ಸಜ್ಜನರ ಒಳ್ಳೆಯ ಕಾರ್ಯಕ್ಕೆ ಧರ್ಮ ಎನ್ನೋಣ



ರಾಜಕೀಯದಲ್ಲಿ ಧರ್ಮ ಇರಲಿ. ಧರ್ಮದಲ್ಲಿ ರಾಜಕೀಯ ಬೇಡ

ಸಾಹಿತ್ಯ–ಸಂಸ್ಕೃತಿ ಸಂವರ್ಧಿಸಲಿ ! ಶಾಂತಿ–ಸಮೃದ್ಧಿ ಸರ್ವರಿಗಾಗಲಿ !

ಧರ್ಮದ ನೆರಳಲ್ಲಿ ಬಾಳುವ ಭಾವ ನಿಮ್ಮದಾಗಲಿ !

ನ್ಯಾಯ, ನೀತಿ ಮತ್ತು ಧರ್ಮ ಎಲ್ಲೆಡೆ ಉಳಿದು ಬೆಳೆದು ಬಾಳಲಿ !

ರಾಷ್ಟ್ರಪ್ರೇಮ, ದೇಶಭಕ್ತಿ, ಸ್ವರಾಜ್ಯನಿಷ್ಠೆ ಮತ್ತು ಕರ್ತವ್ಯಶೀಲತೆ ಬೆಳೆಯಲಿ.